# ಗಂಟಲಲ್ಲಿ ಗಾಳ

ಮಾನಪ್ಪ

ಮೈಸೂರು
ಗ್ರಾಮಸೇವಾನಿಲಯ
೧೯೪೭

# ಒಂದು ಮಾತು

---

ಶ್ರೀ ಮಾನಪ್ಪನವರು ಕನ್ನಡಿಗರಿಗೆ ಅಪರಿಚಿತರಲ್ಲ. ಅವರು ಈಗಾಗಲೇ ಅನೇಕ ಸಣ್ಣ ಕಥೆಗಳನ್ನು ಕನ್ನಡಿಗರ ಮುಂದಿಟ್ಟಿದ್ದಾರೆ. ಹಳ್ಳಿಗರ ಸರಳ ಜೀವನ ಚಿತ್ರಿಸುವುದರಲ್ಲಿ ಮಾನಪ್ಪನವರು ನಿಪುಣರು. ಈ ಕಥಾ ಸಂಕಲನದಲ್ಲಿ ಮಲೆನಾಡಿನ ಹಳ್ಳಿಗರ ಜೀವನದ ಮೂರು ಚಿತ್ರಗಳನ್ನು ಬಹಳ ಸರಸವಾದ ಶೈಲಿಯಲ್ಲಿ ಚಿತ್ರಿಸಿದ್ದಾರೆ.

**ಪ್ರಕಾಶಕರು.**

# ವಿವರ

# ಮಿತ್ರಶತ್ರು

---

## ಒಂದು

" ನಾನು ಕೊಡುತ್ತೇನೆ ಭಾವ "

" ಇಲ್ಲ, ಭಾವ ! ನಾನು ಕೊಡುತ್ತೇನೆ."

" ಬನ್ನಿ ಎಂದು ಕರೆದವನು ನಾನು "

" ಆದ್ದರಿಂದ ನೀವು ಕೊಡಬಾರದು " ಎಂದು ತಲಮುಕ್ಕಿ ಸೋಮಯ್ಯ ಹೋಟಲಿನ ಬಿಲ್ಲನ್ನೂ ದುಡ್ಡನ್ನೂ ಮೇಜಿನ ಮೇಲಿಟ್ಟ.

ಹೋಟಲಿಗೆ ಕರೆದುಕೊಂಡು ಬಂದ ಸೋಮಯ್ಯನ ಭಾವನೆಂಟ ಕೆಳಮನೆ ಕಳಸಯ್ಯನಿಗೆ ಈ ಕಾರ್ಯ ಸರಿಬೀಳಲಿಲ್ಲ. ಮೇಜಿನ ಮೇಲಿದ್ದ ದುಡ್ಡನ್ನು ತಳ್ಳಿ ಹೋಟಲಿನವನಿಗೆ ತಾನು ಕೊಡಲು ಕೈಯನ್ನು ಮುಂದೆ ಚಾಚಿ ಹೇಳಿದ, " ಕರೆದುಕೊಂಡು ಬಂದವನು ನಾನು, ನನ್ನ ಕೈಯಿಂದ ತೆಗೆದುಕೊಳ್ಳಿ.''

ಇವರ ಪೇಚಾಟವನ್ನು ನೋಡಿ, ಹೋಟಲಿನವನು ಸೋಮಯ್ಯನ ಕೈಯಿಂದ ಬಿಲ್ಲನ್ನೂ ಕಳಸಯ್ಯನ ಕೈಯಿಂದ ದುಡ್ಡನ್ನೂ ತೆಗೆದು ಮೇಜಿನೊಳಕ್ಕೆ ಹಾಕುತ್ತಾ ಹೇಳಿದ, " ಇಬ್ಬರ ಕೈಯಿಂದಲೂ ನಾನು ತೆಗೆದುಕೊಂಡೆ." ಕಳಸಯ್ಯನಿಗೆ ತುಂಬಾ ಸಂತೋಷವಾಯಿತು.

ದುಗ್ಗಮ್ಮ ಪಕ್ಕದಲ್ಲಿ ನಿಂತು ನೋಡುತ್ತಿದ್ದಳು. ತಲಮುಕ್ಕಿ ಸೋಮಯ್ಯನಿಗೆ ಅದೇ ವರುಷ ಕೆಳಮನೆ ಕಳಸಯ್ಯನ ತಂಗಿ ದುಗ್ಗಮ್ಮನೊಂದಿಗೆ ಮದುವೆಯಾಗಿತ್ತು. ಮೂರು ಮಂದಿಯೂ ಜಾತ್ರೆಗೆ ಬಂದಿದ್ದರು.

ಕೆಳಮನೆ ಕಳಸಯ್ಯ ಗಟ್ಟಿಮುಟ್ಟಾದ ಆಳು ; ಬೆವರು ಚೆಲ್ಲಿದವರಿಗೆ ರಕ್ತ ಚೆಲ್ಲುವ ಸ್ವಭಾವ. ಎಂಥಾ ಕಷ್ಟ ಕೆಲಸವಾದರು ನಗುಮುಖದಲ್ಲಿ

ಮಾಡುತ್ತಿದ್ದ. ಕೆಲಸ ಮಾಡುವಾಗ ಕಳಸಯ್ಯ ಜೊತೆ ಇದ್ದರೆ ಹತ್ತು ಜನರಿದ್ದ ಧೈರ್ಯ. ಕೈಗೊಂಡ ಕೆಲಸವನ್ನು ಸಾಧಿಸುವುದು ಮುಖ್ಯವೇ ವಿನಾ ಲಾಭ ಹಾನಿಗಳ ಕಡೆಗೆ ಅವನ ಗಮನವಿರುತ್ತಿರಲಿಲ್ಲ. ಸ್ವಂತ ಹಿಡುವಳಿ ಗಾರ; ತಾನೇ ಬೇಸಾಯ ಮಾಡುತ್ತಿದ್ದ, ಆಳುಗಳ ಜೊತೆಯಲ್ಲಿ ಕೆಲಸಕ್ಕೆ ನಿಂತರೆ ಯಜಮಾನರಿರುವರೆಂಬ ಬೇಸರವಾಗಲಿ, ಭಯವಾಗಲಿ ಆಳುಗಳಿ ಗಿರುತ್ತಿರಲಿಲ್ಲ. ಕಳಸಯ್ಯ ತನ್ನ ಮನೆಯವರಂತೆ ಅವರನ್ನು ನೋಡಿ ಕೊಳ್ಳುತಿದ್ದ. ತಲಮಕ್ಕಿ ಸೋಮಯ್ಯನಾದರೆ ಶ್ರೀಮಂತ; ಲೆಕ್ಕಾಚಾರದ ಮನುಷ್ಯ. ಅಡ್ಡಹಾದಿಗೆ ಹೋಗುವ ಸ್ವಭಾವದವನಲ್ಲ. ಈ ಹೊಸ ನೆಂಟಸ್ಥಿಕೆಯಿಂದ ಎರಡು ಮನೆತನಗಳಲ್ಲಿಯೂ ಅನ್ಯೋನ್ಯತೆ ಬೆಳೆಯಿತು. ಹಿತೈಷಿಯಾದ ಅಣ್ಣನೊಂದಿಗೆ ಬಾಳಿದ ದುಗ್ಗಮ್ಮನಿಗೆ ಯೋಗ್ಯನಾದ ಗಂಡ ಸಿಕ್ಕಿದ

ಹೋಟಲಿನಿಂದ ಅಂಗಡಿಯ ಕಡೆ ಹೊರಟರು. ಮೋಹಗೊಳಿಸು ವಂತೆ ಅಂಗಡಿಗಳನ್ನು ಜಾತ್ರೆಗಾಗಿ ಅಲಂಕರಿಸಿದ್ದರು. ಅಂಗಡಿಯಲ್ಲಿ ಸಾಮಾನು ಕೊಳ್ಳದೆ ಮುಂದೆ ಹೆಜ್ಜೆ ಇಡಲು ಮನಸ್ಸು ಬಾರದು. ಸಾಮಾನು ಕೊಳ್ಳಲು ನಿಂತುಕೊಂಡರೆ ಗಂಟೆ ಕಳೆದರು ಇಂಥಾ ಸಾಮಾನು ಕೊಳ್ಳ ಬೇಕೆಂದು ನಿರ್ಧಾರ ಮಾಡಲು ಆಗುತ್ತಿರಲಿಲ್ಲ. ಒಂದಕ್ಕಿಂತ ಒಂದು ಅಂದ, ಚಂದ. ಒಂದು ಉಪಯೋಗಕ್ಕೆ ಉಪಯುಕ್ತವಾಗಿದ್ದರೆ ಇನ್ನೊಂದು ತನ್ನ ಸೌಂದರ್ಯ ರಾಶಿಯಿಂದ ಮನಸ್ಸನ್ನು ಸೂರೆಗೊಳ್ಳುತ್ತಿತ್ತು. ಅಂಗಡಿಯ ಸಾಮಾನುಗಳನ್ನೆಲ್ಲಾ ಕೊಂಡು ಕೊಂಡು ತನ್ನ ಹೊಸ ಸಂಸಾರವನ್ನು ಅಚ್ಚುಕಟ್ಟಾಗಿ ಶೃಂಗಾರಗೊಳಿಸುವ ಮನಸ್ಸು ದುಗ್ಗಮ್ಮನಿಗೆ ಅಣ್ಣನನ್ನು ಕೇಳಲು ಮನಸ್ಸು ಬಾರದು; ಗಂಡನನ್ನು ಪೀಡಿಸಲು ಇನ್ನೂ ಸಲಿಗೆ ಸಾಲದು. ಇಬ್ಬರ ಹಿಂದೆ ನಿಂತಿರುತ್ತಿದ್ದಳು.

ಅಂಗಡಿಗೆ ಹೋಗುತ್ತಲೇ ತಂಗಿಯ ಮನಸ್ಸಿನ ವಸ್ತು ಅಣ್ಣನಿಗೆ ಗೊತ್ತಾಗುತ್ತಿತ್ತು. ಆ ಸಾಮಾನುಗಳನ್ನೆತ್ತಿ ತಂಗಿಗೆ ಕೊಡುವಷ್ಟರಲ್ಲಿ ಸೋಮಯ್ಯ ಅದರ ಬೆಲೆ ಕೊಟ್ಟಿರುತಿದ್ದ. ಬೆಲೆ ಕೊಟ್ಟು ಸಾಮಾನು ಕೊಳ್ಳಲು ಕಳಸಯ್ಯ ಆರಂಭಿಸಿದ. ಸಾಮಾನು ಬೇಡವೆಂದು ನಿರಾಕರಿ ಸಲು ದುಗ್ಗಮ್ಮ ಪ್ರಾರಂಭಿಸಿದಳು. ತಂಗಿಯ ಈ ನಟನೆ ಅಣ್ಣನಿಗೆ ತಿಳಿ

ಯಿತು, ಹೇಳಿದ " ಇಷ್ಟು ಬೇಗ ನೀನು ಕೈಬಿಡುವೆಯೆಂದು ನಾನು ನೆನಸಿರಲಿಲ್ಲ."

ಅಣ್ಣನ ಮಾತನ್ನು ಕೇಳಿ ತಂಗಿ ಭೂಮಿಯಲ್ಲಿ ಹುದುಗಿಹೋದಳು. ಮನಸ್ಸಿನಲ್ಲಿ ಅಂದುಕೊಂಡಳು. " —ಅಯ್ಯೋ ದೇವರೆ ! ಈ ಹೆಣ್ಣು ಜನ್ಮವನ್ನೇಕೆ ಸೃಷ್ಟಿಮಾಡಿದೆ ? ನಮ್ಮದೆಂದು ಅಕ್ಕರೆಯಿಂದ ಕರೆದಿದ್ದನ್ನು ದೂರ ಮಾಡುವೆವು, ಪರರೆಂದು ಹಳಿದವರನ್ನು ನಮ್ಮವರನ್ನಾಗಿ ಮಾಡಿಕೊಳ್ಳುವೆವು.

## ಎರಡು

"ನೀವಿಬ್ಬರೆ ಸರಿ, ಪ್ರಪಂಚದಲ್ಲೆಲ್ಲಿಯೂ ಭಾವನೆಂಟಂದಿರಿಲ್ಲ; ಹೋಗಿ ತಿಂಗಳು ಗಟ್ಲೆ ಭಾವನ ಮನೆಯಲ್ಲಿ ಕುಳಿತುಕೊಂಡರೆ ಮನೆ ಕಡೆ ಕೆಲಸ ಕಾರ್ಯ ಹೇಗೆ ನಡೆಯಬೇಕು ?" ಎಂದು ಕಳಸಯ್ಯ ಮನೆಯೊಳಗೆ ಕಾಲಿಡುತ್ತಲೇ ಆತನ ತಾಯಿ ಹೇಳಿದರು.

ಪೇಟಾ ತೆಗೆದು, ಅಂಗಿಯನ್ನು ಬಿಚ್ಚುತ್ತಾ ಕಳಸಯ್ಯ ಹೇಳಿದ, " ಭಾವ ಮನೆಯಲ್ಲಿರಲಿಲ್ಲ, ತಿರುಗಾಟಕ್ಕೆ ಹೋಗಿದ್ದವರು ಮೊನ್ನೆ ಮನೆಗೆ ಬಂದುದರಿಂದ ಇಷ್ಟು ದಿನವಾಯಿತು. ಅವಳೊಬ್ಬಳನ್ನೇ ಹೇಗೆ ಬಿಟ್ಟು ಬರಲಿ''?

" ಬರುವಾಗ ಜೊತೆಯಲ್ಲಿ ಅವಳನ್ನೂ ಕರೆದುಕೊಂಡು ಬರದೆ ಒಬ್ಬನೇ ಬಂದೆ ! ಗಂಡನ ಮನೆಗೆ ಹೋಗಿ ಎಷ್ಟು ದಿನಗಳಾದವು ? ನೀನಾದರು ಹೋಗಿ ನೋಡಿಕೊಂಡು ಬರುವೆ, ನಾನೇನು ಮಾಡಲಿ ? ಹೆತ್ತ ಕರಳಲ್ಲವೆ ?"

" ಮನೆಗೆ ಬಂದ ಮೇಲೆ ಭಾವನಿಗೆ ಜ್ವರ ಬಂತು. ಬಂದ ಜ್ವರ ಇನ್ನೂ ಬಿಟ್ಟಿಲ್ಲ. ಮೈಮೇಲೆ ಪ್ರಜ್ಞೆಯಿಲ್ಲದಷ್ಟು ಜ್ವರ ಬಂದಿತ್ತು.''

ಮಗನ ಮಾತು ಕೇಳಿ ತಾಯಿಗೆ ಗಾಬರಿಯಾಯಿತು. ಉದ್ವೇಗದಲ್ಲಿ ಹೇಳಿದರು. " ಅಂಥಾ ಕಾಯಿಲೆಯವರನ್ನು ಏನೂ ಅರಿಯದ ಆ ಹುಡುಗಿಯ ಹತ್ತಿರ ಬಿಟ್ಟು ಬರುವುದಕ್ಕೆ ಹೇಗೆ ಮನಸ್ಸಾಯಿತು ? ಇದೇ ಮುಖ ಹೊರಡು.''

"ಅಷ್ಟು ಗಾಭರಿ ಇಲ್ಲ. ಮನೆ ಬಿಟ್ಟು ಬಹಳ ದಿನವಾದ್ದರಿಂದ ನೋಡಿಕೊಂಡು ಹೋಗಲು ಬಂದೆ. ಸಾಯಂಕಾಲ ತಿರುಗಿ ಹೋಗುತ್ತೇನೆ" ಎಂದು ಕಳಸಯ್ಯ ನಿಧಾನವಾಗಿ ನುಡಿದ.

"ಸಾಯಂಕಾಲ ಇನ್ನೇನು ? ಇಲ್ಲಿ ಹೇಗೂ ಕೆಲಸ ನಾಯಿ ತಿಂದ ಕಜ್ಜಾಯವಾಗಿದೆ; ನೀನು ಈಗಲೇ ಹೊರಡು, ಕಾಯಿಲೆಯ ಮಾತು. ಅವಳ ಮಾತನ್ನು ಅವರು ಸ್ವಲ್ಪವೂ ಕೇಳುವುದಿಲ್ಲ."

ಬೇರೆ ದಾರಿ ಕಾಣದೆ ಕಳಸಯ್ಯ ಬಂದ ಹೆಜ್ಜೆಯಲ್ಲೇ ಹಿಂದಿರುಗಿದ.

ದೇವರು ದೊಡ್ಡವನು. ಸಮಯಕ್ಕೆ ಸರಿಯಾಗಿ ಕಳಸಯ್ಯ ತಲಮಕ್ಕಿ ತಲಪಿದ. ಅವನು ಬಂದಾಗ ಸೋಮಯ್ಯನಿಗೆ ಕಾಯಿಲೆ ವಿಷಮಾವಸ್ಥೆಯನ್ನು ಮುಟ್ಟಿತ್ತು. ಮೈಮೇಲೆ ಪ್ರಜ್ಞೆ ಇರಲಿಲ್ಲ. ದುಗ್ಗಮ್ಮ ಅಳುತ್ತಾ ಕುಳಿತಿದ್ದಳು. ಅಣ್ಣನನ್ನು ನೋಡಿ ಆಕೆಗೆ ಹೋದ ಪ್ರಾಣ ಬಂತು ; ಅಳು ಉಕ್ಕಿತು. ಅಣ್ಣನನ್ನು ತಬ್ಬಿಕೊಂಡು ಹೇಳಿದಳು. "ದೇವರು ಕಳುಹಿಸಿದ ಹಾಗೆ ನೀನು ಬಂದೆ, ನನ್ನನ್ನು ಕಾಪಾಡು."

ತಂಗಿಯನ್ನು ಹಿಡಿದುಕೊಂಡು, ಆಕೆಯ ಕಣ್ಣೀರನ್ನೊರೆಸುತ್ತಾ ಕಳಸಯ್ಯ ಹೇಳಿದ, "ಹುಚ್ಚಿ ! ಏಕೆ ಹೀಗೆ ಮಾಡುತಿರುವೆ ? ಹೆದರಬೇಡ. ನಾನಿದ್ದೇನೆ.''

ಬಿಕ್ಕಿ ಬಿಕ್ಕಿ ಅಳುತ್ತಾ ದುಗ್ಗಮ್ಮ ಹೇಳಿದಳು, ''ಮೈಮೇಲೆ ಪ್ರಜ್ಞೆ ಇಲ್ಲ ಅಣ್ಣಯ್ಯ ! ಮನುಷ್ಯರ ಗುರ್ತೂಕೂಡ ಸಿಗುವುದಿಲ್ಲ."

ರೋಗಿಯ ಹತ್ತಿರ ಕಳಸಯ್ಯ ಬಂದ. ತಂಗಿಯ ಮಾತು ಸತ್ಯದಿಂದ ದೂರವಾಗಿರಲಿಲ್ಲ. ಇಷ್ಟು ಬೇಗ ವಿಷಮಾವಸ್ಥೆಗೇರುವುದೆಂದು ಆತನು ಸ್ವಪ್ನದಲ್ಲಿಯೂ ನೆನಸಿರಲಿಲ್ಲ. ತಕ್ಷಣ ಡಾಕ್ಟರಿಗೆ ಜನ ಹೋಯಿತು. ಡಾಕ್ಟರು ಬರುವವರೆಗೆ ಕಳಸಯ್ಯ ತಾನು ಕಲಿತ ಔಷಧಿಯನ್ನು ಮಾಡುತ್ತಲಿದ್ದ. ಮಧ್ಯರಾತ್ರಿ ಡಾಕ್ಟರು ಬಂದರು. ರಾತ್ರಿಯೆಲ್ಲ ರೋಗಿಯ ಬಳಿ ಡಾಕ್ಟರಿದ್ದರು. ಕಳಸಯ್ಯ ದುಗ್ಗಮ್ಮಗಳಿಗೆ ಲೆಕ್ಕಮಾಡಿ ರಾತ್ರಿ ಕಳೆದರು. ಬೆಳಗಿನ ಜಾವ ಜ್ವರ ಹಿಮ್ಮುಖವಾಯಿತು. ಬೆಳಗ್ಗೆ ಔಷಧಿಯನ್ನು ಕೊಟ್ಟು ಡಾಕ್ಟರು ಹೋದರು.

ಜ್ವರ ಬೇಗ ಸಂಪೂರ್ಣವಾಗಿ ಬಿಡದೆ ಕೆಲವುಸಾರಿ ಏರುವುದು, ತಿರುಗಿ

ಇಳಿಯುವುದು. ಇದೇ ರೀತಿ ಬಹಳ ದಿನ ಗೋಳಾಡಿದ. ಒಂದು ತಿಂಗಳು ತರುವಾಯ ಸಂಪೂರ್ಣವಾಗ್ಗಿಬಿಟ್ಟಿತು. ಜ್ವರ ಬಿಟ್ಟಮೇಲೆ ತುಂಬಾ ನಿಶ್ಶಕ್ತಿಯಾದ್ದರಿಂದ ಗಂಟೆ ಗಂಟೆಗೂ ಡಾಕ್ಟರು ಹೇಳಿದ ರೀತಿಯಲ್ಲಿ ಮಧ್ಯಪಾನ ಮಾಡಬೇಕಾಗಿತ್ತು. ಸ್ವಲ್ಪ ಜಾಗರೂಕತೆಯಿಂದ ತಿರುಗಿ ಪ್ರಮಾದವುಂಟಾಗಬಹುದೆಂಬ ಹೆದರಿಕೆಯಿಂದ ಕಳಸಯ್ಯ ಸರ್ಪ ಕಾವಲಿನಿಂದಲೂ ತಾಯಿಯೆಚ್ಚರಿಕೆಯಿಂದಲೂ ನೋಡಿಕೊಳ್ಳುತ್ತಿದ್ದ. ಹಾಸಿಗೆ ಬಿಟ್ಟು ತಿರುಗಾಡಬೇಕಾದರೆ ಸೋಮಯ್ಯನಿಗೆ ಮೂರು ತಿಂಗಳು ಹಿಡಿಯಿತು. ಮೂರು ತಿಂಗಳು ಕಳಸಯ್ಯ ಮನೆ ಮಠ ಬಿಟ್ಟು ತಂಗಿಯ ಮನೆಯಲ್ಲಿದ್ದ.

ಸೋಮಯ್ಯನ ಕಾಯಿಲೆ ನಿಮಿತ್ತ ಕೆಳಮನೆಯಲ್ಲಿ ಸರಿಯಾಗಿ ಬೇಸಾಯ ನಡೆಯಲಿಲ್ಲ. ದೇವರ ಮನಸ್ಸಿಗೆ ಬಂದು ಸೋಮಯ್ಯ ಆರೋಗ್ಯವಂತನಾದ್ದು ಎಲ್ಲರಿಗೂ ಸಂತೋಷವನ್ನುಂಟುಮಾಡಿತು. ಕಾಯಿಲೆಯಿಂದ ಎದ್ದ ಮೇಲೆ ನೆಂಟಭಾವನ ಸಂಬಂಧ ಹೆಚ್ಚು ಗಾಢವಾಯಿತು. ಒಬ್ಬರನ್ನೊಬ್ಬರು ಬಿಟ್ಟಿರುತ್ತಿರಲಿಲ್ಲ. ಒಂದೇ ಮರದ ಎರಡು ಕೊಂಬೆಗಳಂತೆ ಒಂದೇ ಕೊಂಬೆಯ ಎರಡು ಹೂಗಳಂತೆ ನಲಿದರು.

## ಮೂರು

ಭಾವನೆಂಟನ ನಲಿವು ಹೊನಲಾಗಿ ಹರಿಯಿತು. ಪ್ರೇಮ, ವಿಶ್ವಾಸಗಳಿಂದ ಇಬ್ಬರೂ ಸುಖಿಗಳಾಗಿದ್ದರು. ದಸರ ನೋಡಲು ಸೋಮಯ್ಯ, ಕಳಸಯ್ಯ ಇಬ್ಬರೂ ಮೈಸೂರಿಗೆ ಹೊರಟರು. ದುಗ್ಗಮ್ಮನಿಲ್ಲದ ಪ್ರಯಾಣ ಮದುವಳಿಗೆಯಿಲ್ಲದ ಮರುದಿಬ್ಬಣದಂತೆ. ಆದ್ದರಿಂದ ಆಕೆಯನ್ನೂ ಜೊತೆಯಲ್ಲಿ ಕರೆದುಕೊಂಡು ಹೊರಟರು. ರೈಲ್ವೆ ಸ್ಟೇಷನ್ನಿನವರೆಗೆ ಪ್ರಯಾಣ ಸುಖಕರವಾಗಿತ್ತು. ರೈಲ್ವೆ ಸ್ಟೇಷನ್ನಿನಲ್ಲೋ ಜನರ ಗಡಿ ಬಿಡಿ, ಗುಂಪು ಅಸಾಧ್ಯವಾಗಿತ್ತು. ರೈಲು ಬರುವುದು ಒಂದು ಗಂಟೆ ತಡವಿದ್ದರೂ ಪ್ರಯಾಣಿಕರು ಗಂಟು ಮೂಟೆಗಳನ್ನು ಹಿಡಿದುಕೊಂಡು ರೈಲಿನೊಳಗೆ ನುಗ್ಗಲು ಸಿದ್ಧರಾಗಿ ನಿಂತಿದ್ದರು. ಇವರಿಗೆ ನಿಂತುಕೊಳ್ಳಲು ಸ್ಥಳವಿಲ್ಲ. ಎಲ್ಲಾ ಪ್ರಯಾಣಿಕರಂತೆ ಇವರೂ ಸೊಂಟಕಟ್ಟಿಕೊಂಡು ರೈಲಿನ ನಿರೀಕ್ಷಣೆಯಲ್ಲಿ

ನುಗ್ಗಲು ಸಿದ್ಧರಾಗಿ ನಿಂತರು. ಎಲ್ಲರ ಕಣ್ಣು ದಾರಿ ಕಾಯುತ್ತಿತ್ತು; ಕಿವಿ ರೈಲಿನ ಶಬ್ದ ಕೇಳಲು ಉತ್ಸುಕತೆಯಿಂದಿತ್ತು. ತಪಸ್ಸಿಗೆ ಪ್ರಸನ್ನವಾದಂತೆ ಹೊಗೆಯನ್ನು ಕಾರುತ್ತಾ, ಬೆಂಕಿಯನ್ನು ಸೂಸುತ್ತಾ ಅರುವತ್ತು ಕಾಲಿನಿಂದ ರೈಲು ಹರಿದು ಬಂತು.

ರೈಲು ಸ್ಟೇಷನ್ನಿನೊಳಗೆ ಉಸಿರು ಬಿಟ್ಟದ್ದು ತಡ ಉಸಿರು ಹಿಡಿದು ನಿಂತಿದ್ದ ಜನಸ್ತೋಮ ಉಸಿರು ಬಿಡಲು ಒಳಗೆ ನುಗ್ಗಿತು. ಈ ನುಗ್ಗಾಟದಲ್ಲಿ ಕೆಲವರು ಕಾಲು ಮುರಿದುಕೊಂಡರು, ಕೆಲವರ ಕೈಮುರಿಯಿತು. ರೈಲಿನೊಳಗೆ ಹೋದ ಮೇಲೆ ಕೆಲವರ ಸಾಮಾನುಗಳಿರಲಿಲ್ಲ, ಕೆಲವರ ಜೋಬಿನ ದುಡ್ಡು ಮಾಯವಾಗಿತ್ತು.

ರೈಲಿನ ಕಿಟಿಕಿಗಳೆಲ್ಲ ಬಾಗಿಲುಗಳಾದುವು, ಬಾಗಿಲು ಹೆಬ್ಬಾಗಿಲು. ಒಳಗಿದ್ದ ಜನರು ಹತ್ತುವವರನ್ನು ತಳ್ಳುತ್ತಿದ್ದರು, ಹತ್ತುವವರು ಒಂದಕ್ಕೆ ಎರಡಾಗಿ, ನಾಲ್ಕಾಗಿ, ಹತ್ತಾಗಿ ನುಗ್ಗುತ್ತಿದ್ದರು. ಇಪ್ಪತ್ತು ಜನ ಹಿಡಿಯುವ ಗಾಡಿಯಲ್ಲಿ ಆಗಲೇ ಎಪ್ಪತ್ತು ಜನ ತುಂಬಿದ್ದರೂ ನೂರಕ್ಕೆ ಭರ್ತಿಯಾಗಲು ಇನ್ನೂ ಮೂವತ್ತು ಮಂದಿ ಹತ್ತುವ ಪ್ರಯತ್ನದಲ್ಲಿದ್ದರು. ಪ್ರತಿಯೊಬ್ಬ ಪ್ರಯಾಣಿಕನೂ ಒಳಗೆ ನುಗ್ಗಬೇಕಾದರೆ ಲೆನಿನ್‌ಗ್ರಾಡ್‌ನ ಕದನವನ್ನೇ ಮಾಡಬೇಕಾಗಿತ್ತು. ಸೋಮಯ್ಯ, ಕಳಸಯ್ಯ, ದುಗ್ಗಮ್ಮ ಒಂದೇ ಗಾಡಿಯಲ್ಲಿ ಹತ್ತಲು ಪ್ರಯತ್ನಪಡುತ್ತಿದ್ದರಿಂದ ಇಮ್ಮಡಿ ಸಾಹಸ ತೋರಿಸಿಬೇಕಾಗಿತ್ತು. ಬಹು ಪ್ರಯಾಸದಿಂದ ಇವರು ಬಾಗಿಲಬಳಿ ಹೋಗುವುದರಲ್ಲಿ ಒಳಗಿನಿಂದ ಅಲೆಯೊಂದೆದ್ದು ಬಾಗಿಲ ಬಳಿಯಿಂದ ಬಹು ದೂರ ತಳ್ಳಿಬಿಡುತ್ತಿತ್ತು. ಅದನ್ನು ತಡೆಗಟ್ಟಿ ಕೊನೆಯ ಮುತ್ತಿಗೆಯಂತೆ ಪೂರ್ಣ ಸಾಹಸದಿಂದ ನುಗ್ಗಲು ಪ್ರಯತ್ನಪಡುತ್ತಿರುವಾಗ ನೆರೆಗೆ ಸಿಕ್ಕಿದ ದೋಣಿಯಂತೆ ಪಕ್ಕದ ಜನರ ನೂಕಾಟವು ಇವರನ್ನು ಬಹು ದೂರದವರೆಗೆ ತಳ್ಳಿಬಿಡುತ್ತಿತ್ತು. ಈ ತಿವುದಾಟ, ನುಗ್ಗಾಟದಲ್ಲಿ ಮೂರುಮಂದಿಯೂ ಜಯ ಪರಾಜಯರಾಗುತ್ತಾ ಟ್ರೈನಿನ ಬಾಗಿಲನ್ನು ಮುಟ್ಟಿದರು. ಇಲ್ಲಿ ನುಗ್ಗಾಟ ಮುಗಿದು ಕೈಯಾಟ ಆರಂಭವಾಗಿತ್ತು. ಒಳಗೆ ನುಗ್ಗಲು ಇವರು ಪ್ರಯತ್ನಪಡುತ್ತಿದ್ದರು, ಒಳಗಿದ್ದವರು 'ಸ್ಥಳವಿಲ್ಲ'ವೆಂದು ಹೊರಗೆ ದಬ್ಬುತ್ತಿದ್ದರು. ಹೀಗೆ ಕೋಟೆಯ ಎರಡನೆಯ ಸುತ್ತಿನಲ್ಲಿ ಕೈ

ಕೈ ಹತ್ತಿತು. ಜನರು ಮನುಷ್ಯತ್ವವನ್ನು ಬಿಟ್ಟು ಪಶುಗಳಾಗಿ ಮೆರೆದರು. ಅಸಭ್ಯತೆ ತಾನೇ ತಾನಾಗಿ ಮೆರೆಯಿತು. ಸಭ್ಯತೆ ಮೂಲೆ ಹಿಡಿದಿತ್ತು.

ಕೋಟೆಯ ಮೂರನೆಯ ಸುತ್ತನ್ನು ತಲಪುವ ಹೊತ್ತಿಗೆ ನುಗ್ಗಾಟ, ಕೈಯಾಟಗಳ ಜೊತೆಗೆ ಬಾಯಾಟವೂ ತನ್ನ ಪೂರ್ಣ ಸಾಮರ್ಥ್ಯದ ತುದಿಯಲ್ಲಿತ್ತು. ಕಳಸಯ್ಯ ಹತ್ತಲು ರೈಲಿನೊಳಗೆ ಕಾಲಿಡುವನು, ಒಳಗಿದ್ದವರು ಹೊರಗೆ ತುಳ್ಳುವರು. ತಿರುಗಿ ಇವನು ಹತ್ತುವನು, ತಿರುಗಿ ಅವರು ತಳ್ಳುವರು. ಹೀಗೆ ಅನೇಕ ಸಾರಿ ನಡೆಯಿತು. ಇಷ್ಟರಲ್ಲಿ ರೈಲು ಕೂಗಿ ಹೊಗೆ ಬಿಟ್ಟಿತು. ಕೊನೆ ಗಳಿಗೆಯ ಸಾಹಸವಾದ್ದರಿಂದ ಕಳಸಯ್ಯ ಬಲವಾಗಿ ಕಾಲೂರಿ ಒಳಗೆ ನುಗ್ಗಿ ತಂಗಿಯನ್ನು ಎಳೆದುಕೊಂಡ, ಹೊರಗಿನಿಂದ ಸೋಮಯ್ಯ ಆಕೆಯನ್ನು ದಬ್ಬಿದ, ಇಬ್ಬರ ಒಮ್ಮುಖಸಾಹಸದಿಂದ ದುಗ್ಗಮ್ಮ ಒಳಸೇರಿದಳು. ಈಗ ರೈಲಿನೊಳಗೆ ಕಾಳಗ ಆರಂಭವಾಯಿತು. ಬಲಪೂರ್ವಕವಾಗಿ ಕಳಸಯ್ಯ ತಂಗಿಯೊಂದಿಗೆ ಒಳಗೆ ನುಗ್ಗಿದುದರಿಂದ ಒಳಗಿದ್ದ ವ್ಯಕ್ತಿಯೊಂದು ರೇಗಿ ಕಳಸಯ್ಯನ ಕತ್ತಿಡಿದು ದಬ್ಬಲು ಕೈ ಹಾಕಿತು ಕಳಸಯ್ಯ ಸಮಗ್ರೈಯಾಗಿ ನಿಂತಿದ್ದರಿಂದ ಆ ವ್ಯಕ್ತಿಯು ಕತ್ತನ್ನೇ ಹಿಡಿದು ಹೊರಗೆ ದಬ್ಬಿದ. ಅವರಿಬ್ಬರ ಮಾರಾಮಾರಿಯಿಂದ ಒಳಗಿನಿಂದ ತಳ್ಳುವುದು ಕಡಮೆಯಾದ್ದರಿಂದ ಸೋಮಯ್ಯ ಒಳಗೆ ತೂರಿಕೊಂಡು ಹೆಂಡತಿಯನ್ನು ಗಟ್ಟಿಯಾಗಿ ಹಿಡಿದುಕೊಂಡ. ಕಳಸಯ್ಯನನ್ನು ದಬ್ಬಲು ಕೈ ಹಾಕಿದವನು ಕುಳಿತು ವ್ಯಾಪಾರ ಮಾಡಿ ಮೈ ಬೆಳೆಸಿಕೊಂಡಿದ್ದ ವ್ಯಕ್ತಿ. ಕಳಸಯ್ಯ ಮಣ್ಣನ್ನು ಗುದ್ದಿ ಬೆಳೆ ತೆಗೆದ ಕಲಿ. ಇವನು ತಳ್ಳಿದ ರಭಸಕ್ಕೆ ಆ ವ್ಯಾಪಾರಿ ಗಾಡಿಯಿಂದ ನಾಲ್ಕೈದು ಮಾರು ದೂರ ಹೋಗಿ ಬಿದ್ದ. ಮೂಗು ಮುರಿದಂತಾಯಿತು. ರೈಲಿನ ಚಕ್ರ ನಾಲ್ಕೈದು ಸುತ್ತು ತಿರುಗಿತ್ತು. ಗಾಡಿ ತಪ್ಪುವ ಭಯದಿಂದ ಏಟನ್ನು ಲಕ್ಷಿಸದೆ ಗಾಡಿ ಹತ್ತಲು ಎದ್ದು ಓಡಿದ. ಪೋಲೀಸಿನವನು ಅವನನ್ನು ಒಳಗೆ ತಳ್ಳಿ ಕದ ಹಾಕಿದ.

ಒಳಗೆ ಬಂದ ವ್ಯಾಪಾರಿ ಕಳಸಯ್ಯನ ತಲೆಯ ಮೇಲೆ ಹೊಡೆದ. ಅವನು ತಲೆ ತಪ್ಪಿಸಿಕೊಳ್ಳಲು ಏಟು ಮೂಗಿನ ಮೇಲೆ ಬಿತ್ತು. ಮೂಗಿನ ಮೇಲೆ ಬಿದ್ದ ತಕ್ಷಣ ಕಳಸಯ್ಯನ ಮೈ ರಕ್ತವೆಲ್ಲ ಬಿಸಿಯೇರಿತು; ಸಿಟ್ಟು ನೆತ್ತಿಗೇರಿತು. ಆ ವರ್ತಕನ ಕತ್ತನ್ನು ಬಗ್ಗಿಸಿಕೊಂಡು ಎರಡು ಮೂರು

ಸಾರಿ ಗುದ್ದಿದ. ಅಷ್ಟರಲ್ಲಿ ಅಕ್ಕಪಕ್ಕದವರು ಇಬ್ಬರನ್ನು ಹಿಡಿದು ಸಮಾಧಾನ ಪಡಿಸಿದರು. ಇಬ್ಬರೂ ಸಿಂಹಗಳಂತೆ ದುರುದುರನೆ ಒಬ್ಬರನ್ನೊಬ್ಬರು ನೋಡಿದರು. ರೈಲು ಒಂದು ಮೈಲಿ ದಾಟಿತ್ತು, ಇಬ್ಬರೂ ತೆಪ್ಪಗಾದರು.

## ನಾಲ್ಕು

ಶತ್ರು ಮಿತ್ರ, ಬಡವ ಭಾಗ್ಯವಂತ ಯಾರನ್ನೂ ನಿದ್ದೆ ಬಿಡುವುದಿಲ್ಲ. ರಾತ್ರಿ ಯೇರಿದ ಹಾಗೂ ರೈಲಿನಲ್ಲಿ ಕುಳಿತ ಪ್ರಯಾಣಿಕರಿಗೆ ತೂಕಡಿಕೆ ಜಾಸ್ತಿಯಾಯಿತು. ರೈಲು ತೂಗುತ್ತಾ ಓಡುತ್ತಿತ್ತು, ಪ್ರಯಾಣಿಕರು ತೂಕಡಿಸುತ್ತಾ ಒಬ್ಬರ ಮೇಲೊಬ್ಬರು ಒರಗುತ್ತಿದ್ದರು. ಶತೃಮಿತ್ರರ ಭೇದವಾಗಲಿ, ಬಡವ ಭಾಗ್ಯವಂತರ ಬಿಂಕವಾಗಲಿ ಇಲ್ಲದೆ ಎಲ್ಲರೂ ನಿದ್ರಾದೇವಿಯ ಮಡಲಿನಲ್ಲಿ ಲೀನರಾದರು. ಆ ನಿದ್ದೆಯಲ್ಲಿ ಕಳಸಯ್ಯನ ತೊಡೆಯ ಮೇಲೆ ಆ ವ್ಯಾಪಾರಿ ಒರಗಿದ್ದ. ಆತನ ಹೆಸರು ಚಂದ್ರಯ್ಯ.

ಚಂದ್ರಯ್ಯನು ಎಚ್ಚರವಾದಾಗ ಬೆಳಕು ಹರಿದಿತ್ತು. ಕಳಸಯ್ಯನ ಮೈಮೇಲೊರಗಿ ಮಲಗಿದುದರಿಂದ ಅಸಮಾಧಾನದಿಂದ ಎದ್ದ. ಕಳಸಯ್ಯ, ಸೋಮಯ್ಯನೂ ಅರನಿದ್ದೆ ಮಾಡಿ ಎದ್ದರು. ದುಗ್ಗಮ್ಮ ಕುಳಿತು ಬೆಳಗು ಮಾಡಿದ್ದಳು.

ಅರನಿದ್ದೆ, ಆಲಸ್ಯದಿಂದ ಎಲ್ಲರ ಮನಸ್ಸೂ ತಳಮಳಗೊಂಡಿತ್ತು; ಮುಖದ ಮೇಲೆ ಖಿನ್ನತೆ ಮಂಡಿಸಿತ್ತು. ಎಲ್ಲರಲ್ಲಿಯೂ ಕಾಫಿ ಕುಡಿಯುವ ತವಕ. ಮನಸ್ಸಿನ ಮಾತು ಬಾಯಿಗೆ ಬಂದಂತೆ ಸ್ಟೇಷನ್ನಿನ ಮುಂದೆ ರೈಲು ನಿಂತಿತು. ಬಾಡಿದ ಮುಖ ಅರಳಿದವು. ಅರನಿದ್ದೆಯಿಂದ ಅರ್ಧ ಮುಚ್ಚಿದ ಕಣ್ಣು ತೆರೆದವು. ಕಟ್ಟೆಯೊಡದಂತೆ ಪ್ರಯಾಣಿಕರು ಹೋಟಲಿಗೆ ನುಗ್ಗಿದರು. ಎಲ್ಲರ ಗಮನವು ಕಾಫಿತಿಂಡಿಯ ಮೇಲಿತ್ತೆ ವಿನಾ ತಮ್ಮ ಮೇಲಾಗಲಿ, ಅಕ್ಕಪಕ್ಕದವರ ಮೇಲಾಗಲಿ ಇರಲಿಲ್ಲ. ದುಗ್ಗಮ್ಮನನ್ನು ಗಾಡಿಯಲ್ಲಿ ಕೂರಿಸಿ ಕಳಸಯ್ಯ, ಸೋಮಯ್ಯ ಆ ನುಗ್ಗಾಟದಲ್ಲಿ ನುಗ್ಗಿದರು. ಬಹಳ ಹೆಣಗಾಡಿದರೂ ಕೈಗೆ ಕಾಫಿ ತಿಂಡಿ ಬರಲಿಲ್ಲ, ಬಾಯಿ ಸಪ್ಪೆಗರೆಯುತಿತ್ತು.

ತನ್ನ ಶಕ್ತಿಯನ್ನೆಲ್ಲ ಬಿಟ್ಟು ಕಳಸಯ್ಯ ಮುಂದೆ ನುಗ್ಗಿ ದುಡ್ಡನ್ನು ಎಸೆದು ಕಾಫಿ ತಿಂಡಿಗೆ ಕೈ ಹಾಕಿ ಅದನ್ನು ಸೋಮಯ್ಯನಿಗೆ ಕೊಟ್ಟು ತಿರುಗಿ ಕಾಫಿ ತಿಂಡಿಗೆ ಕೈ ಹಾಕಿದ. ಇವನ ಹಿಂದೆ ಚಂದ್ರಯ್ಯ ತನ್ನ ಪ್ರಯತ್ನವನ್ನೆಲ್ಲ ಖರ್ಚುಮಾಡಿ ಮುಂದೆ ನುಗ್ಗಲು ಪ್ರಯತ್ನಪಡುತಿದ್ದ. ಇವನ ಪ್ರಯತ್ನ ವಿಫಲವಾಗುತಿತ್ತು, ಕಾಫಿ ತಿಂಡಿ ಪಾತ್ರೆ ಖಾಲಿಯಾಗುತಿತ್ತು. ಸುಮ್ಮ ನಿದ್ದರೆ ಕಾಫಿ ತಿಂಡಿ ಸಿಗುವ ಆಸೆಯಿಲ್ಲವೆಂದು ಸುತ್ತಲೂ ನೋಡಿದ. ಮುಂದೆ ಕಳಸಯ್ಯ ಕಾಫಿ ತಿಂಡಿಯನ್ನು ತೆಗೆದುಕೊಂಡದ್ದನ್ನು ನೋಡಿ ಅದನ್ನು ತನಗೆ ಕೊಡುವಂತೆ ಕೇಳಿದ. ಕೇಳಿದವರಾರೆಂದು ಹಿಂದಿರುಗಿ ನೋಡಿದಾಗ ತನ್ನ ಶತ್ರು ಚಂದ್ರಯ್ಯ. ಅವನ ಮುಖದ ಮೇಲೆ ಕಾಫಿ ಕುಡಿಯುದ ಖಿನ್ನತೆಯ ರೇಖೆ ಒಡೆದು ಮೂಡಿತ್ತು. ಆಲೋಚಿಸುವ ಮುಂಚೆ ಕೈ ಅವನ ಕಡೆ ಹೋಗಿತ್ತು. ಸೋಮಯ್ಯನ ಕೈಯಿಂದ ಕಾಫಿ ತಿಂಡಿ ಚಂದ್ರಯ್ಯ ತೆಗೆದುಕೊಂಡ.

ಕಳೆದ ರಾತ್ರಿಯ ದೃಶ್ಯಕ್ಕೂ ಇಂದು ಬೆಳಗಿನ ದೃಶ್ಯಕ್ಕೂ ಅಜಗಜಾಂತರ ವ್ಯತ್ಯಾಸ. ಅದೇ ಜನ; ಅದೇ ಗುಂಪು; ಸ್ವಭಾವ ಬೇರೆ.

ಕಾಫಿ ತಿಂಡಿಯಾದಮೇಲೆ ಚಂದ್ರಯ್ಯ ದುಡ್ಡು ಕೊಡಲು ಬಂದಾಗ ಕಳಸಯ್ಯ ಹೇಳಿದ, "ದುಡ್ಡಿಗಾಗಿದ್ದರೆ ನಾನು ಕೊಡುತಿರಲಿಲ್ಲ. ದುಡ್ಡಿಗೆ ಅಂಗಡಿಯಲ್ಲಿತ್ತಲ್ಲ.''

"ನಿನ್ನೆ ರಾತ್ರಿಯ ಕಾದಾಟದ ಬಹುಮಾನ. ಅದಕ್ಕೆ ಬೆಲೆಯಿಲ್ಲ. ಅದು ಮೈತ್ರಿಯ ಬಲವು" ಎನ್ನುತ್ತಾ ಸೋಮಯ್ಯ ತನ್ನ ಹೆಂಡತಿಯ ಕಡೆಗೂ ಭಾವನೆಂಟನ ಕಡೆಗೂ ನೋಡಿದ.

ಕಳಸಯ್ಯ ಸುಮ್ಮನಿದ್ದ; ದುಗ್ಗಮ್ಮ ಅಣ್ಣನ ಕಡೆ ನೋಡಿ ನಕ್ಕಳು.

ರಾತ್ರಿಯ ಕಾದಾಟದಲ್ಲಿ ಸಮಾಧಾನಪಡಿಸಿದವರಲ್ಲೊಬ್ಬರು ಹೇಳಿದರು, "ಅವರ ಮಾತು ನನ್ನ ಮನಸ್ಸಿಗೆ ಬಂತು. ಇದು ರೈಲಿನ ಜಗಳ. ರೈಲನ್ನು ಹತ್ತುವವರೆಗೆ ಶತ್ರು ಹತ್ತಿದ ಮೇಲೆ ಮಿತ್ರ.''

ಚಂದ್ರಯ್ಯ ದುಡ್ಡನ್ನು ಜೋಬಿನೊಳಗೆ ಹಾಕಿಕೊಂಡ.

ಮುಂದಿನ ಸ್ಟೇಷನ್ನಿನಲ್ಲಿ ರೈಲು ನಿಂತಾಗ ಕಿತ್ತಲೆ ಹಣ್ಣುಗಳನ್ನು ಹೊತ್ತುಕೊಂಡು ಒಬ್ಬ ಬಂದ. ಅವು ಕೊಡಗಿನ ಸೊಗಸಾದ ಕಿತ್ತಳೆ

ಹಣ್ಣುಗಳು. ನೋಡಿ ಬಿಡಲಾರದೆ ಚಂದ್ರಯ್ಯ ಎರಡು ಡಜ಼ನ್ ಕಿತ್ತಳೆ ಹಣ್ಣುಗಳನ್ನು ಕೊಂಡುಕೊಂಡ. ಸೋಮಯ್ಯ, ಕಳಸಯ್ಯ ದುಗ್ಗಮ್ಮನಿಗಲ್ಲದೆ ಅಕ್ಕಪಕ್ಕದಲ್ಲಿ ಕುಳಿತಿದ್ದ ಪ್ರಯಾಣಿಕರಿಗೆಲ್ಲ ಹಣ್ಣನ್ನು ಹಂಚಿದ. ಕಿತ್ತಳೆ ಹಣ್ಣನ್ನು ತಿನ್ನುತ್ತಾ ವ್ಯಕ್ತಿಯೊಂದು ಹೇಳಿತು, "ಕಳಸಯ್ಯನವರ ಪ್ರಯಾಸದ ಫಲ ಎಲ್ಲರ ಬಾಯಿಯನ್ನು ಸಿಹಿಮಾಡಿಸಿತು."

ಎಲ್ಲರೂ ನಕ್ಕರು.

ಕಿತ್ತಳೆ ಹಣ್ಣಿನ ತೊಳೆಯನ್ನು ಬಾಯಿಗೆ ಹಾಕಿಕೊಂಡು ಚಂದ್ರಯ್ಯ ಹೇಳಿದ, "ಪ್ರಪಂಚದ ರಹಸ್ಯವಿಷ್ಟೆ! ಎಲ್ಲರಿಗಾಗಿ ಬಾಳುವವನು ತಾನು ಸುಖವಾಗಿರುವುದಲ್ಲದೆ ಎಲ್ಲರನ್ನೂ ಸುಖಿಯನ್ನಾಗಿ ಮಾಡುವನು. ತಾನೊಬ್ಬನೇ ಸುಖವಾಗಿರಬೇಕೆಂದು ಬಯಸುವವನು ತಾನು ದುಃಖಪಡುವುದಲ್ಲದೆ ಇತರರಿಗೂ ದುಃಖವನ್ನುಂಟುಮಾಡುವನು."

"ಸಾವಿರ ಮಾತಿನ ತತ್ವವನ್ನು ಚಂದ್ರಯ್ಯ ಒಂದೇ ಮಾತಿನಲ್ಲಿ ಆಡಿದರು" ಎಂದ ಸೋಮಯ್ಯ.

ಮಾತು, ಕಥೆ, ತಮಾಷೆಯಲ್ಲಿ ಯಾತ್ರೆ ಆನಂದಮಯವಾಗಿತ್ತು. ಸಮಯ ಕಳೆದಿದ್ದು ಒಬ್ಬರಿಗೂ ಗೊತ್ತಾಗಲಿಲ್ಲ. ರೈಲು ನಿಂತಾಗ ಮೈಸೂರು ಬಂತೆಂದು ಪ್ರಯಾಣಿಕರೆಲ್ಲ ಗಾಡಿಯಿಂದಿಳಿಯಲು ಪ್ರಾರಂಭಿಸಿದರು. ಕಳಸಯ್ಯ, ಸೋಮಯ್ಯನಂತೆ ಚಂದ್ರಯ್ಯನೂ ದಶರ ನೋಡಲು ಮೈಸೂರಿಗೆ ಬಂದಿದ್ದ. ನಾಲ್ಕು ಮಂದಿಯೂ ಕುದುರೆ ಗಾಡಿಯನ್ನು ಮಾಡಿಕೊಂಡು ಒಂದು ಹೋಟಲಿಗೆ ಹೋಗಿ ಬಿಡಾರ ಮಾಡಿದರು. ನಾಲ್ಕು ಮಂದಿಯೂ ಒಟ್ಟಿಗೆ ಹೋಗುತಿದ್ದರು, ಒಟ್ಟಿಗೆ ಬರುತ್ತಿದ್ದರು.

ಶ್ರೀರಂಗಪಟ್ಟಣ, ಬೃಂದಾವನ, ಚಾಮುಂಡಿಬೆಟ್ಟ ಇತ್ಯಾದಿ ಸ್ಥಳಗಳನ್ನು ಎಲ್ಲರು ಒಟ್ಟಿಗೆ ಹೋಗಿ ನೋಡಿಕೊಂಡು ಬಂದರು. ಪ್ರಯಾಣದಲ್ಲಿ ಚಿಕ್ಕಪುಟ್ಟ ಚಿಲ್ಲರೆ ಬಾಬಿನ ಖರ್ಚನ್ನು ಯಾರಾದರೊಬ್ಬರು ಕೊಟ್ಟು ಬಿಡುತಿದ್ದರು. ಕೆಲವುಸಾರಿ ದುಡ್ಡು ಕೊಡುವಾಗ ಕಳಸಯ್ಯ, ಸೋಮಯ್ಯನಲ್ಲಿ ಮೇಲಾಟ ಪ್ರಾರಂಭವಾಗುತಿತ್ತು. ಆಗ ಚಂದ್ರಯ್ಯ ಅವರಿಬ್ಬರನ್ನೂ ಸೋಲಿಸುತ್ತಿದ್ದ.

ಬರಬರುತ್ತಾ ಇಬ್ಬರ ಮೇಲಾಟ ಮೂರುಮಂದಿಯನ್ನೂ ವ್ಯಾಪಿಸಿತು. ಇವರ ಈ ಮೇಲಾಟವನ್ನು ದುಗ್ಗಮ್ಮ ಸೋಜಿಗದಿಂದ ನೋಡುತ್ತಾ ನಿಂತಿರುತಿದ್ದಳು. ಕ್ರಮೇಣ ಖರ್ಚಿನ ಬಹು ಭಾಗವನ್ನು ಚಂದ್ರಯ್ಯ ಬಲತ್ಕಾರದಿಂದ ಕೊಡಲು ಆರಂಭಿಸಿದ. ಈ ಮೇಲಾಟವನ್ನು ತಡೆಯಲಾರದೆ ಒಂದುಸಾರಿ ಚಂದ್ರಯ್ಯ ಹೇಳಿದ, "ನಾನು ಮಕ್ಕಳು ಮರಿ ಇಲ್ಲದವನು. ನನಗೆ ಹಿಂದೆಯೂ ಇಲ್ಲ ಮುಂದೆಯೂ ಇಲ್ಲ. ನಾನು ಹಣ ಸಂಪಾದಿಸಿದೆ; ಬಂಧುಗಳನ್ನು ಸಂಪಾದಿಸಲಿಲ್ಲ. ನಾನು ಸತ್ತಮೇಲೆ ನನ್ನ ಆಸ್ತಿಯನ್ನು ಹಂಚಿಕೊಳ್ಳುವುದಕ್ಕೆ ಅನೇಕಮಂದಿ ಸಂಬಂಧಿಗಳು ಹುಟ್ಟಬಹುದು. ಆದ್ದರಿಂದ ಸಾಯುವ ಮುಂಚೆ ನಿಮ್ಮಂಥವರ ಜೊತೆಯಲ್ಲಿದ್ದು ಖರ್ಚು ಮಾಡೋಣವೆಂದು ಇಲ್ಲಿಗೆ ಬಂದೆ. ದೇವರು ದಯೆಯಿಂದ ನಿಮ್ಮನ್ನು ಇಲ್ಲಿ ಒದಗಿಸಿಕೊಟ್ಟ."

ಶ್ರೀರಂಗಪಟ್ಟಣ ನೋಡಲು ಹೋದಾಗ ಪಶ್ಚಿಮವಾಹಿನಿಯಲ್ಲೊಂದು ವಿಚಿತ್ರ ಘಟನೆ ಸಂಭವಿಸಿತು. ನದಿಯಲ್ಲಿ ನಾಲ್ಕು ಮಂದಿಯೂ ಮಿಂದರು. ಚಂದ್ರಯ್ಯ ನದಿಯಿಂದ ಮೇಲೆ ಬಂದಿರಲಿಲ್ಲ. ಅವನು ದುಗ್ಗಮ್ಮನನ್ನು ಕರೆದ. ಆಕೆ ನದಿಯ ಹತ್ತಿರ ಬಂದಳು. ಕೈಯನ್ನು ಮುಂದೆ ನೀಡಲು ಹೇಳಿದ. ಅದೇ ಪ್ರಕಾರ ಆಕೆ ಕೈ ಮುಂದೆ ಚಾಚಿದ ತರುವಾಯ, ಚಂದ್ರಯ್ಯ ನದಿಯ ನೀರನ್ನು ಬೊಗಸೆಯಲ್ಲಿ ತೆಗೆದುಕೊಂಡು ದುಗ್ಗಮ್ಮನ ಕೈಮೇಲೆ ಬಿಡುತ್ತಾ ಹೇಳಿದ, "ತಾಯಿ ಕಾವೇರಿ, ನಾನು ಈ ಜನ್ಮದಲ್ಲಿ ಅಕ್ಕತಂಗಿಯರ ಮುಖ ನೋಡಲಿಲ್ಲ, ದೇವರು ನನಗೆ ಮಕ್ಕಳನ್ನೂ ಕೊಡದೆ ಹೋದ. ಇಂದು ದುಗ್ಗಮ್ಮನನ್ನು ಧರ್ಮತಂಗಿಯನ್ನಾಗಿ ಸ್ವೀಕರಿಸಿಕೊಂಡಿರುವೆನು. ಇದಕ್ಕೆ ನೀನೇ ಸಾಕ್ಷಿ"

ನಾಟಕದ ಈ ದೃಶ್ಯವನ್ನು ಕಳಸಯ್ಯ, ಸೋಮಯ್ಯ ಬೆಪ್ಪುಬೆರಗಾಗಿ ನಿಂತು ನೋಡಿದರು. ದುಗ್ಗಮ್ಮ ಕಲ್ಲಿನ ಮೂರ್ತಿಯಂತೆ ನಿಂತಿದ್ದಳು.

ಶ್ರೀರಂಗಪಟ್ಟಣದಿಂದ ಬಂದವರು ವಸ್ತು ಪ್ರದರ್ಶನಾಲಯಕ್ಕೆ ಹೋದರು. ದುಗ್ಗಮ್ಮ ಒಬ್ಬಳು, ಕೊಡಿಸುವವರು ಮೂರುಮೂರುಮಂದಿ. ಸೋಮಯ್ಯ ಕೈ ಹಿಡಿದ ಗಂಡ; ಕಳಸಯ್ಯ ಒಡಹುಟ್ಟಿದ ಸಹೋದರ; ಚಂದ್ರಯ್ಯ ಧರ್ಮಸಹೋದರ. ವಸ್ತುಪ್ರದರ್ಶನಾಲಯವನ್ನು ಅನೇಕಸಾರಿ

ಸುತ್ತಿ ಬಗೆಬಗೆಯ ವಸ್ತುಗಳನ್ನು ಕೊಂಡರು. ಹೋಟೆಲಿಗೆ ಹಿಂತಿರುಗುವಾಗ ದುಗ್ಗಮ್ಮ ಸಾಮಾನಿನಿಂದ ಮುಚ್ಚಿಹೋಗಿದ್ದಳು. ದಸರ ಮುಗಿಸಿಕೊಂಡು ನಾಲ್ಕು ಮಂದಿಯೂ ಊರಿನ ಕಡೆ ಹೊರಟರು. ರೈಲು ಹತ್ತುವಾಗ ಯಾವ ಸ್ಥಳದಲ್ಲಿ ಕಾದಾಟವಾಗಿತ್ತೊ ಅದೇ ಸ್ಥಳದಲ್ಲಿ ಚಂದ್ರಯ್ಯನಿಂದ ಅಗಲಬೇಕಾಯಿತು. ನಾಲ್ಕುಮಂದಿಯ ಕಣ್ಣಲ್ಲಿಯೂ ಕಣ್ಣೀರು ಹೆಪ್ಪುಗಟ್ಟಿತ್ತು. ಮುಂದಿನ ಬೇಸಗೆಗೆ ಮೂರು ಮಂದಿಯೂ ತನ್ನೂರಿಗೆ ಬರುವಂತೆ ಚಂದ್ರಯ್ಯ ಅವರಿಗೆ ಆಹ್ವಾನವಿತ್ತ. ಇವರು ಬರಲು ಒಪ್ಪಿದರು. ತರುವಾಯ ಚಂದ್ರಯ್ಯನನ್ನು ತಮ್ಮಲ್ಲಿಗೆ ಕರೆದರು. ಅವನು ಹರ್ಷದಿಂದೊಪ್ಪಿಕೊಂಡು ಹೇಳಿದ, "ವರ್ಷಕ್ಕೆ ಆರುತಿಂಗಳು ರೈತರಿಗೆ ಕೆಲಸ. ಮಿಕ್ಕ ಸಮಯ ಪುರಸೊತ್ತಿನಿಂದಿರುತ್ತಾರೆ. ವ್ಯಾಪಾರಿಗೆ ಹಾಗಲ್ಲ, ವರ್ಷದಲ್ಲಿ ಹನ್ನೆರಡು ತಿಂಗಳೂ ಅವನಿಗೆ ಬಿಡುವಿರುವುದಿಲ್ಲ. ದಸರ ನೋಡಬೇಕಾದರೆ ಅಂಗಡಿ ಮುಚ್ಚಿಕೊಂಡು ಬರಬೇಕಾಯಿತು. ನಿಮ್ಮಲ್ಲಿಗೆ ಬರುವಾಗಲೂ ಹಾಗೇ ಮಾಡುತ್ತೇನೆ. ನೀವು ಮಾತ್ರ ನಮ್ಮಲ್ಲಿಗೆ ಬರಲು ಮರೆಯಬೇಡಿ."

"ವರ್ಷಕ್ಕೆ ಆರು ತಿಂಗಳು ಕೆಲಸಮಾಡುವ ರೈತ ಸೋಮಾರಿಯಾಗಿರಬೇಕು. ಕಷ್ಟಗಾರನಾದ ರೈತನಿಗೆ ಬಿಡವಿರುವುದಿಲ್ಲ" ಎಂದು ಕಳಸಯ್ಯ ಹೇಳಿದ.

"ಆನೆ ಭಾರ ಆನೆಗೆ, ಇರುವೆ ಭಾರ ಇರುವೆಗೆ. ಕಷ್ಟಗಾರನಿಗೆ ಯಾವ ಉದ್ಯೋಗದಲ್ಲಿಯೂ ಬಿಡುವಿರುವುದಿಲ್ಲ. ಮೈಗಳ್ಳ ಎಲ್ಲಾ ಕಸಬಿನಲ್ಲಿಯೂ ಮೈಗಳ್ಳನೆ" ಎಂದ ಸೋಮಯ್ಯ.

"ಅಕ್ಕ! ಯಾರು ಮರೆತರೂ ನೀನುಮಾತ್ರ ನನ್ನ ಮರೆಯಬೇಡ. ಖಂಡಿತ ಮುಂದಿನ ಬೇಸಗೆಗೆ ಬರಬೇಕು" ಎಂದು ಚಂದ್ರಯ್ಯ ವಿಶೇಷ ಅಕ್ಕರೆಯಿಂದ ದುಗ್ಗಮ್ಮನಿಗೆ ಹೇಳಿದ.

ದುಗ್ಗಮ್ಮನ ಮುಖ ಕೆಂಪಾಯಿತು. ರೈಲು ಹೊರಟಿತು.

"ನಾವು ಬರುತ್ತೇವೆ, ನೀವು ಮೊದಲು ನಮ್ಮಲ್ಲಿಗೆ ಖಂಡಿತ ಬನ್ನಿ" ಎಂದಳು ದುಗ್ಗಮ್ಮ.

ರೈಲು ಮುಂದೆ ಸರಿಯಿತು, ಮಾತು ಮೌನವಾಯಿತು, ತುಂಬಿದ ಹೃದಯದಿಂದ ಒಬ್ಬರನ್ನೊಬ್ಬರು ಅಗಲಿದರು.

## ಐದು

ಮೈಸೂರಿನ ಪ್ರವಾಸ, ಚಂದ್ರಯ್ಯನ ಸಹವಾಸ ಇವುಗಳ ಪ್ರಭಾವ ದಿಂದ ಕಳಸಯ್ಯನಿಗೆ ವ್ಯಾಪಾರದ ಗೀಳು ಹಿಡಿಯಿತು. ವ್ಯಾಪಾರದ ಅಲ್ಪ ಸ್ವಲ್ಪ ಅನುಭವದಿಂದ, ತನಗೆ ಅದರಲ್ಲಿ ಪೂರ್ಣ ಪರಿಶ್ರಮವಿದೆಯೆಂಬ ವಿಶ್ವಾಸ ಅವನಲ್ಲಿ ಮೂಡಿತು. ಊರನ್ನು ತಲಪುತ್ತಲೇ ತಡೆಬಡೆಯಿಲ್ಲದೆ ಅಂಗಡಿಯನ್ನು ತೆರೆಯುವ ಯೋಚನೆಯಲ್ಲಿ ಬಂದ.

ತೂಕಮಾಡಲು ತಕ್ಕಡಿ, ಸೆಟ್ಟುಗಲ್ಲು ; ಅಳೆಯಲು ಸೇರು, ಪಾವು ಗಳನ್ನು ತಂದಿದ್ದರೂ ಅಂಗಡಿಯನ್ನು ತೆರೆಯುವಾಗ ಪೂಜೆಗೆ ಗಜಕಡ್ಡಿ ಯನ್ನೂ ಕತ್ತರಿಯನ್ನೂ ಇಟ್ಟರು.

ಕಳಸಯ್ಯ ದಿನಸಿ ಅಂಗಡಿ ತೆರೆಯಲು ಯೋಚನೆಮಾಡಿ ಜವಳಿ ಅಂಗಡಿ ತೆರೆದ. ಅಳೆಯುವಾಗ ಕೈ, ಮೈ ಧೂಳಾಗುವುದಲ್ಲದೆ ಹೆಚ್ಚು ಸಮಯ ನಿಂತರೆ ಸಾಮಾನು ಕೆಟ್ಟುಹೋಗುವುದರಿಂದ ದಿನಸಿ ಅಂಗಡಿಯ ನ್ನಿಡದೆ ಕಳಸಯ್ಯ ಜವಳಿ ಅಂಗಡಿಯನ್ನು ತೆರೆದನೆಂದು ಜನರು ಅಂದು ಕೊಂಡರು. ದಿನಸಿ ಅಂಗಡಿಗೋಸ್ಕರ ಭರ್ತಿಮಾಡಿದ ಸಾಮಾನು ಬಂದಿಳಿ ಯಿತು. ಜವಳಿ ಅಂಗಡಿ ತೆರೆದಿದ್ದ ಕಾರಣ ಹೊಸದಾಗಿ ಬಟ್ಟೆ ಭರ್ತಿಮಾಡ ಬೇಕಾಯಿತು. ಒಂದೇ ಅಂಗಡಿಯಲ್ಲಿ ದಿನಸಿ, ಜವಳಿ ಎರಡರ ವ್ಯಾಪಾ ರವೂ ಪ್ರಾರಂಭವಾಯಿತು.

ಕೈಯಲ್ಲಿ ದುಡ್ಡು ಜೋರಾಗಿ ತಿರುಗಾಡಲು ಆರಂಭವಾಯಿತು. ದುಡ್ಡಿನ ತಿರುಗಾಟದೊಂದಿಗೆ ಕಳಸಯ್ಯನಿಗೂ ತಿರುಗಾಟ ಬೆನ್ನಿಗಂಟಿ ಕೊಂಡಿತು. ದಿನ ಬೆಳಗಾದರೆ ಪೇಟೆ, ಸಂತೆಗೆ ಓಡಾಟ.

ಸೊಂಟಕ್ಕೆ ಸೋರೆಕಾಯಿ ಬುರುಡೆಯನ್ನು ಕಟ್ಟಿಕೊಂಡು ನೀರಿಗಿಳಿ ದವನಂತೆ ಕಳಸಯ್ಯ ವ್ಯಾಪಾರ ಪ್ರಾರಂಭಿಸಿದ.

ವ್ಯಾಪಾರಕ್ಕೆ ಧನಸಹಾಯ ಸೋಮಯ್ಯನದು. ದುಗ್ಗಮ್ಮನಿಗಾಗಲಿ,

ಆಕೆಯ ತಾಯಿಗಾಗಲಿ ಇದು ಹಿತವಾಗಿರಲಿಲ್ಲ. "ನಾನು ಕೇವಲ ಸಹಾಯಮಾಡಿದೆ" ಎಂದು ಸೋಮಯ್ಯ ಹೇಳಿದ. "ವ್ಯಾಪಾರಕ್ಕೋಸ್ಕರ ನಾನು ಸಾಲ ಎತ್ತಿರುವೆನು, ಅಂಗಡಿಯಿದೆ ಸಾಲವಿದೆ" ಎಂದ ಕಳಸಯ್ಯ.

ವ್ಯಾಪಾರ ನಡೆಯಿತು.

ತಂಗಿಯ ಮದುವೆಗೂ ಇತರ ಖರ್ಚಿನ ಬಾಬಿಗೂ ಕಳಸಯ್ಯ ಮೊದಲೇ ಅಲ್ಲಿಇಲ್ಲಿ ಸಾಲ ಎತ್ತಿದ್ದ. ವ್ಯಾಪಾರ ಆರಂಭವಾದಮೇಲೆ ಅವರಿಗೆ ಬಡ್ಡಿಕೊಡುವುದು ನಿಂತಿತು. ಸಾಲಕೊಟ್ಟವರು ಎರಡು ಮೂರು ವರುಷ ಸುಮ್ಮನಿದ್ದರು; ಕಳಸಯ್ಯನೂ ಸುಮ್ಮನಿದ್ದ. ಬಡ್ಡಿ ಬೆಳೆಯುತ್ತಾ ಹೋದಮೇಲೆ ತಗಾದೆ ಆರಂಭವಾಯಿತು. ಕಳಸಯ್ಯ ಅದನ್ನು ಮನಸ್ಸಿನ ಮೇಲೆ ಹಾಕಿಕೊಳ್ಳಲಿಲ್ಲ. ಅಂಗಡಿ ಇದೆ. ಭಾವ ನೆಂಟನಿದ್ದಾನೆ ಎಂಬ ದೃಢ ನಂಬಿಕೆ ಅವನಿಗಿತ್ತು. ಬೇರೆ ದಾರಿ ಕಾಣದೆ ಸಾಲಕೊಟ್ಟವರು ಕೋರ್ಟಿಗೆ ಹೋದರು. ಅದು 'ಡಿಕ್ರಿ'ಯಾಗಿ ಜಮೀನಿನ ಜಪ್ತಿಗೆ ಆರ್ಡರು ಹುಟ್ಟಿತು. ಕಳಸಯ್ಯ ತಲೆಮರೆಸಿಕೊಂಡು ತಿರುಗಾಡಲಾರಂಭಿಸಿದ. ಅಮೀನನು ಒಂದು ದಿನ ಜಪ್ತಿಗೆ ಆರ್ಡರನ್ನು ಹಿಡಿದುಕೊಂಡು ಕೆಳಮನೆಗೆ ಬಂದಿಳಿದ. ತಲಮಕ್ಕಿಗೆ ಸಮಾಚಾರ ಹೋಗಿ ಸೋಮಯ್ಯ ಬಂದ ಮನೆಗೆ ಬೆಂಕಿಬಿದ್ದಾಗ ಯೋಚಿಸುತ್ತಾ ಕುಳಿತುಕೊಳ್ಳಲಾಗುವುದಿಲ್ಲ; ವಿಪತ್ತಿನಲ್ಲಿ ನೆಂಟನಿಗೆ ಸಹಾಯಮಾಡದಿರುವುದಕ್ಕಾಗುವದಿಲ್ಲ. ವ್ಯಾಪಾರಕ್ಕೆ ಹಿಂದೆ ಧನಸಹಾಯಮಾಡಿದ್ದ. ಅದರೊಂದಿಗೆ ಇದು ಸೇರಿಕೊಂಡಿತು.

ಊಟಕ್ಕೆ ಸಂಬಂಧ ವಿನಾ ಲೇವಾದೇವಿಗಲ್ಲ. ಸೋಮಯ್ಯ ಧನ ಸಹಾಯಮಾಡಿದರು. ಕಾನೂನಿನ ಪ್ರಕಾರ ಕೆಳಮನೆಯ ಆಸ್ತಿಯನ್ನೆಲ್ಲ ತನ್ನ ಹೆಸರಿಗೆ ಭೋಗ್ಯಮಾಡಿಸಿಕೊಂಡ. ಭಾವ ನೆಂಟರಲ್ಲಿ ಭೋಗ್ಯವೇನು? ಕ್ರಯಪತ್ರವೇನು? ನಂಬಿಕೆ, ಸಂಬಂಧ ಮುಖ್ಯ. ಭೋಗ್ಯ, ಕ್ರಯಪತ್ರಗಳೆಲ್ಲ ಕೇವಲ ವ್ಯವಹಾರಕ್ಕಾದ್ದರಿಂದ ತಮ್ಮ ಜಮೀನೆಲ್ಲವನ್ನು ಸೋಮಯ್ಯನ ಹೆಸರಿಗೆ ಭೋಗ್ಯಮಾಡಿಕೊಡಲು ಕಳಸಯ್ಯನಿಗಾಗಲಿ, ಅತನ ತಾಯಿಗಾಗಲೀ ಸ್ವಲ್ಪವೂ ವ್ಯಸನವಾಗಲಿಲ್ಲ. ತಮ್ಮ ಕರಳನ್ನೇ ಆತನಿಗೊಪ್ಪಿಸಿರುವಾಗ ಜಮೀನನ್ನು ಭೋಗ್ಯಮಾಡಿಕೊಡುವುದು ಹೆಚ್ಚಲ್ಲ.

ಅಧಿಕ ಸಂಪಾದನೆಯ ಆಶೆಯಿಂದ ವ್ಯಾಪಾರಕ್ಕಾರಂಭಿಸಿ, ಪೂರ್ವೀ

ಕರು ಸಂಪಾದಿಸಿದ ಆಸ್ತಿಯನ್ನು ಭೋಗ್ಯಮಾಡಿಕೊಟ್ಟದ್ದರಿಂದ ಕಳಸಯ್ಯ ಅಂಗಡಿಯನ್ನು ಮುಚ್ಚಿದನು. ಅಂಗಡಿ ಮುಚ್ಚಿದರೂ ಅದರ ಸಂಸ್ಕಾರ ತಿರುಗಾಟ ಹೋಗಲಿಲ್ಲ. ವ್ಯಾಪಾರ ಮಾಡಿದವನಿಗೆ ವ್ಯವಸಾಯ ಮಾಡಲು ಮೈ ಬಗ್ಗಲಿಲ್ಲ. ತನಗಲ್ಲದಿದ್ದರೆ ಜನರಿಗಾದರೂ ಪ್ರತಿಯೊಬ್ಬರೂ ತಲೆ ಬಗ್ಗಿಸಬೇಕಾಗುವುದು. ಎಲ್ಲರೂ ಗದ್ದೆಗಿಳಿದಿರುವಾಗ ಕಳಸಯ್ಯನಿಗೆ ತಾನು ತಿರುಗಾಡುವುದು ತನಗೆ ನಾಚಿಕೆಯನ್ನುಂಟುಮಾಡುತಿತ್ತು. ಇದು ವರೆಗೂ ವ್ಯಾಪಾರದ ಹಂಗಿತ್ತು, ಅದು ಹರಿದುಹೋಗಿರುವಾಗ ಹಳ್ಳಿಯಲ್ಲಿ ನಿರುದ್ದೇಶದಿಂದ ತಿರುಗಾಡುವುದು ಆತನಿಗೆ ಅವಮಾನಕರವಾಗಿತ್ತು. ಆದ್ದ ರಿಂದ ಎತ್ತನ್ನು ಗದ್ದೆಗೆ ಹೊಡೆದುಕೊಂಡು ಹೋಗಿ ಒಂದು ದಿನ ಆರು ಕಟ್ಟಿದ. ನಾಲ್ಕೈದು ಸುತ್ತು ಹೂಡಿರಲಿಲ್ಲ. ಸೋಮಯ್ಯನ ಮನೆ ಯಿಂದ ಕರೆ ಬಂತು. ಸಮಾಚಾರ ತಂದವನು ಹೇಳಿದ, “ದುಗ್ಗಮ್ಮ ರಾತ್ರಿಯಿಂದ ಸ್ವಸ್ಥವಿಲ್ಲ, ಆಸ್ಪತ್ರೆಗೆ ಜನ ಹೋಗಿದೆ. ಸೋಮಯ್ಯ ಬಹಳ ಗಾಬರಿಯಲ್ಲಿದ್ದಾರೆ. ನಿಮ್ಮನ್ನು ತಕ್ಷಣ ಕರೆದುಕೊಂಡು ಬರಲು ಹೇಳಿರುವರು.”

ತಂಗಿಯ ಅನಾರೋಗ್ಯ ನಿಮಿತ್ತ ಕಳಸಯ್ಯ ಹೋಗಬೇಕಾಯಿತು. ಎತ್ತನ್ನು ಬಿಚ್ಚಿ ಮೇಯಲು ಹೊಡೆದು ಗದ್ದೆಯಿಂದಲೇ ತಲಮಕ್ಕಿಗೆ ಹೋದ. ಇವನು ಹೋಗುವಷ್ಟರಲ್ಲಿ ಡಾಕ್ಟರು ಬಂದು ರೋಗಿಯನ್ನು ಪರೀಕ್ಷೆ ಮಾಡುತಿದ್ದರು. ಡಾಕ್ಟರು ಹೇಳಿದರು, “ಮಳೆಗಾಲ, ಗರ್ಭಿಣಿ ಯನ್ನು ಇಲ್ಲಿಟ್ಟುಕೊಳ್ಳುವುದು ಉತ್ತಮವಲ್ಲ. ನೀವು ಏನಾದರೂ ಮಾಡಿ ಆಸ್ಪತ್ರೆಗೆ ಕರೆದುಕೊಂಡು ಬಂದರೆ ನನ್ನ ಕೈಲಾದಮಟ್ಟಿಗೆ ಪ್ರಯತ್ನಪಡು ತ್ತೇನೆ.”

ತುಂಬಿದ ಗರ್ಭಿಣಿ; ಮಳೆಗಾಲದ ಹಾದಿ; ಆಸ್ಪತ್ರೆ ಆರು ಮೈಲಿ. ಆದರೂ ಆಸ್ಪತ್ರೆಗೆ ಕರೆದುಕೊಂಡು ಹೋಗದೆ ವಿಧಿಯಿಲ್ಲ ದುಗ್ಗಮ್ಮ ನನ್ನು ಆಸ್ಪತ್ರೆಗೆ ಕರೆದುಕೊಂಡು ಹೋಗಬೇಕಾದರೆ ನೆಂಟ ಭಾವನಿಗೆ ಹೆಣ ಬಿದ್ದುಹೋಯಿತು. ಆಸ್ಪತ್ರೆ ತಲಪಿದ ಒಂದು ಗಂಟೆಯಲ್ಲಿ ಹೆರಿಗೆಯಾ ಯಿತು. ಹುಟ್ಟಿದ ಒಂದು ಗಂಟೆಯಲ್ಲಿ ಮಗು ತೀರಿಕೊಂಡಿತು, ಸಣ್ಣ ಜೀವ ಹೋಗಿದ್ದರ ದುಃಖ ಯಾರಿಗೂ ಆಗಲಿಲ್ಲ. ಎಲ್ಲರೂ ದೊಡ್ಡ ಜೀವ

ವನ್ನುಳಿಸುವ ಪ್ರಯತ್ನದಲ್ಲಿದ್ದರು. ಒಂದು ತಿಂಗಳು ರೆಪ್ಪೆಯ ಮೇಲೆ ರೆಪ್ಪೆ ಹಾಕದೆ ರಾತ್ರಿ ಹಗಲೂ ಆರೈಕೆ ಮಾಡಿದ್ದರಿಂದ ದುಗ್ಗಮ್ಮ ಹಾಸಿಗೆಯ ಮೇಲೆ ಹೊರಳಾಡುವ ಹಾಗಾದಳು.

ಜಡಿಮಳೆ. ಊರೆಲ್ಲ ರೈತರು ಮಣ್ಣನ್ನು ಕಚ್ಚಿಕೊಂಡು ಬೇಸಾಯ ಮಾಡುತಿದ್ದರು. ಕಳಸಯ್ಯ, ಆತನ ತಾಯಿ ಆಸ್ಪತ್ರೆಯಲ್ಲಿ ದುಗ್ಗಮ್ಮನ ಹತ್ತಿರವಿದ್ದರು. ಎರಡು ತಿಂಗಳ ತರುವಾಯ ಕಳಸಯ್ಯ ಮನೆಯ ಮುಖ ನೋಡಿದ. ಎಲ್ಲರೂ ಗದ್ದೆ ನಟ್ಟು ಮುಗಿಸಿದ್ದರು. ಕಳಸಯ್ಯ ಹಾಕಿದ ಸಸಿ ಅಗೋಡಿಯಲ್ಲಿ ಬೆಳೆದು ನಿಂತಿತ್ತು. ಆ ಬೆಳೆದು ನಿಂತಿದ್ದ ಸಸಿಯನ್ನೇ ಕಿತ್ತು ಸ್ವಲ್ಪ ಗದ್ದೆ ನಾಟಿ ಮಾಡಿಸಿದ. ಬಾಕಿ ಗದ್ದೆಯೆಲ್ಲ ಆ ವರ್ಷ ಹಾಳುಬಿತ್ತು.

ತಂಗಿಯನ್ನು ಆಸ್ಪತ್ರೆಯಿಂದ ಮನೆಗೆ ಕರೆದುಕೊಂಡು ಬಂದು ಆರೋಗ್ಯವಂತಳನ್ನಾಗಿ ಮಾಡಿ ಗಂಡನ ಮನೆಗೆ ಕಳುಹಿಸಿಕೊಟ್ಟರು. ದುಗ್ಗಮ್ಮ ಗಂಡನ ಮನೆಗೆ ಹೋದ ಸ್ವಲ್ಪ ದಿನದಲ್ಲಿ ಸೋಮಯ್ಯ ಕಾಯಿಲೆ ಬಿದ್ದ. ಅವನ ಕಾಯಿಲೆಯ ವರ್ತಮಾನ ಕೇಳಿ ಕಳಸಯ್ಯ ನೋಡಲು ಹೋದ. ಸೋಮಯ್ಯನ ಸ್ಥಿತಿ ದಿನದಿನಕ್ಕೂ ವಿಷಮವಾಗುತ್ತಾ ಬಂತು. ಅದನ್ನು ನೋಡುತ್ತಾ ಕಳಸಯ್ಯನಿಗೆ ಮನೆಗೆ ಬರಲು ಸಾಧ್ಯವಾಗಲಿಲ್ಲ. ಹಿಂದೆ ಬಂದ ಕಾಯಿಲೆಗಿಂತ ಇದು ಭೀಕರವಾಗಿತ್ತು. ಪ್ರಾಣ ಹೋಯಿತೆಂದು ಎರಡು ಸಾರಿ ಬಾಯೊಳಗೆ ನೀರು ಬಿಡಲು ಸೋಮಯ್ಯನನ್ನು ಹೊರಗೆ ತಂದಿದ್ದರು. ಕಳಸಯ್ಯ ಸೂಜಿಯ ಮೊನೆಯ ಮೇಲೆ ನಿಂತು ನೋಡಿಕೊಂಡ. ಅವನ ಆ ತಾಯಿಯೆಚ್ಚರಿಕೆಯಿಂದಲೇ ಸೋಮಯ್ಯ ಬದುಕಿಕೊಂಡ. ಅವನು ಬದುಕಿ, ಸ್ವಲ್ಪ ಶಕ್ತಿ ಬರಬೇಕಾದರೆ ನಾಲ್ಕು ತಿಂಗಳು ಹಿಡಿಯಿತು. ಆ ನಾಲ್ಕು ತಿಂಗಳೂ ನೆರಳಿನಂತೆ ಕಳಸಯ್ಯ ಎಚ್ಚರಿಕೆಯಿಂದ ನೋಡಿಕೊಂಡ.

ಅಪಾಯದಿಂದ ಸೋಮಯ್ಯ ಪಾರಾದನೆಂದು ದೃಢಪಟ್ಟಮೇಲೆ ಕಳಸಯ್ಯ ಮನೆಗೆ ಬಂದ. ಆ ವರ್ಷವೂ ಕಾಯಿಲೆಯ ದೆಸೆಯಿಂದ ವ್ಯವಸಾಯ ನಡೆಯಲಿಲ್ಲ. ಆಳುಕಾಳುಗಳು ಸ್ವಲ್ಪ ಗದ್ದೆಯನ್ನು ಬೆಳೆಗೆ ಮಾಡಿದ್ದರು. ಎರಡು ವರ್ಷ ತಪ್ಪದೆ ಬೇಸಾಯ ನಿಂತುಹೋದ್ದರಿಂದಲೂ

ಗೊಬ್ಬರ ಗೋಡು ಹಾಕದಿದ್ದುದರಿಂದಲೂ ಜಮೀನಿನಲ್ಲಿ ಉತ್ಪಾದಕ ಶಕ್ತಿ ಕಡಮೆಯಾಯಿತು. ಆ ಜಮೀನಿನಿಂದ ತಿರುಗಿ ಸರಿಯಾದ ಬೆಳೆ ತೆಗೆಯ ಬೇಕಾದರೆ ಎರಡು ವರ್ಷ ಹಿಡಿಯಿತು.

## ಆರು

ಜಮೀನು ಸೋಮಯ್ಯನಿಗೆ ಭೋಗ್ಯವಾದಮೇಲೆ ಅದರಲ್ಲಿ ಹೊಗಳಿರುವ ಪ್ರಕಾರ ಕಳಸಯ್ಯ ಒಂದು ಸಾರಿಯೂ ಹಣವನ್ನಾಗಲಿ, ದವಸವನ್ನಾಗಲಿ ಪಾವತಿ ಮಾಡಿರಲಿಲ್ಲ. ಹೆಂಡತಿಯ ಕಾಯಿಲೆ, ತನ್ನ ಕಾಯಿಲೆಯ ಗಲಾಟೆಯಲ್ಲಿ ಸೋಮಯ್ಯನೂ ಮಾತನಾಡಿಸಲಿಲ್ಲ. ವರ್ಷಗಳು ಒಂದೊಂದಾಗಿ ಕಳೆದವು. ಕಳಸಯ್ಯ ಆಗಾಗ ತಂಗಿಯ ಮನೆಗೆ ಹೋಗಿ ಬರುತಿದ್ದ. ಆಗ ನೆಂಟಭಾವನಲ್ಲಿ ಪ್ರಪಂಚದ ವಿಚಾರಗಳ ಮೇಲೆ ಮಾತು ಕಥೆ ನಡೆದರೂ ಕಳಸಯ್ಯನ ಬಾಯಿಂದ ಒಂದು ದಿನವೂ ಸಾಲದ ವಿಚಾರ ಬರಲಿಲ್ಲ. ಸೋಮಯ್ಯನಿಗೆ ಆ ವಿಚಾರವನ್ನೆತ್ತಲು ಬಾಯಿ ಬರುತಿರಲಿಲ್ಲ.

ಪ್ರಪಂಚದಲ್ಲಿ ಕುರಿ ಎಲ್ಲಿಯಾದರೂ ತೋಳನ ಮುಂದೆ ಆಹಾರವಾಗಿ ಹೋಗಿರುವುದೇ! ತೋಳನೆ ಕುರಿಯನ್ನು ಹುಡುಕಬೇಕು.

ಆರು ಮಳೆಗಾಲ ಕಳೆದವು; ಕಳಸಯ್ಯ ಆರುಸಾರಿ ರೂಢಿಸಿ, ಪೈರನ್ನು ಕೊಯ್ದ. ದವಸ ಮನೆಗೆ ಬಂದರು ಸಾಲಕ್ಕೆ ಏನೂ ವಜಾ ಕಟ್ಟಲಿಲ್ಲ. ವಜಾ ಕಟ್ಟುವುದಾದರೂ ಹೇಗೆ? ಬಂದ ಉತ್ಪತ್ತಿ ತನಗೇ ಸಾಲದು, ತಿಳಿದು ತಿಳಿದು ಸುಮ್ಮನಿದ್ದ.

ಸೋಮಯ್ಯನ ತಂದೆ ತೀರಿಹೋದಾಗ ನಗದು ಹಣ ಮಾಡಿಟ್ಟಿರಲಿಲ್ಲ. ನಗದು ಹಣ ಮಾಡಿಟ್ಟಿರುವರೆಂದು ಜನ ಅಂದುಕೊಳ್ಳುತಿದ್ದರು ಸೋಮಯ್ಯನ ಕೈಗೆ ಯಜಮಾನಿಕೆ ಬಂದಮೇಲೆ ಅವನು ಎರಡುಸಾರಿ ಕಾಯಿಲೆ ಬಿದ್ದ. ಆತನ ಹೆಂಡತಿ ಒಂದುಸಾರಿ ಕಾಯಿಲೆ ಬಿದ್ದಳು. ಆದರೂ ನಗದು ಹತ್ತು ಸಾವಿರ ರೂಪಾಯಿ ಕೂಡಿಸಿದ. ಒಂದು ದಿನ ಮಧ್ಯಾಹ್ನ ಊಟವಾದಮೇಲೆ ಮಲಗುವುದನ್ನು ಬಿಟ್ಟು ಬಾಗಿಲು ಕಿಟಕಿಗಳನ್ನೆಲ್ಲ

ಮುಚ್ಚಿಕೊಂಡು ಕಳಸಯ್ಯನ ಲೆಕ್ಕವನ್ನು ಬಿಚ್ಚಿದ. ಜಮೀನು ಭೋಗ್ಯ ವಾದಮೇಲೆ ಒಂದು ಸಾರಿಯೂ ಲೆಕ್ಕವನ್ನು ನೋಡಿರಲಿಲ್ಲ. ಮರೆತು ಹಾಗೆ ಮಾಡಿರಲಿಲ್ಲ, ಲೆಕ್ಕಕ್ಕೆ ವಸೂಲಿಲ್ಲದೆ ಸುಮ್ಮನೆ ನೋಡುವುದು ಪ್ರಯೋಜನವಿಲ್ಲವೆಂದು ನೋಡಿರಲಿಲ್ಲ. ಒಂದುಸಾರಿಯೂ ಲೆಕ್ಕಕ್ಕೆ ಜಮ ಬರಲಿಲ್ಲ. ಎಲ್ಲಿಯ ವರೆಗೆ ಸುಮ್ಮನಿರುವುದು ? ಲೆಕ್ಕ ಮಾಡುತ್ತಾ, ಪ್ರತಿ ವರ್ಷದ ಬಾಕಿಗೆ ಬಡ್ಡಿ ಸೇರಿಸುತ್ತಾ ಹೋದ.

ಗಡಿಯಾರ ಮೂರು ಹೊಡೆಯಿತು. ದುಗ್ಗಮ್ಮ ಗಂಡನನ್ನು ಕಾಫಿಗೆ ಕರೆಯಲು ಬಂದಳು. ಬಾಗಿಲು, ಕಿಟಕಿಗಳೆಲ್ಲ ಮುಚ್ಚಿರುವುದನ್ನು ನೋಡಿ ಇನ್ನು ಎದ್ದಿಲ್ಲವೆಂದು ಹಿಂದಕ್ಕೆ ಹೋದಳು. ನಾಲ್ಕುಗಂಟೆಯಾ ಯಿತು. ತೆರೆಯಲಿಲ್ಲ. ಮಧ್ಯಾಹ್ನದ ಕಾಫಿ ತಿಂಡಿ ಮುಗಿಯದೆ ಮುಂದಿನ ಕೆಲಸಕ್ಕೆ ಕೈ ಹಾಕುವಹಾಗಿಲ್ಲ. ದುಗ್ಗಮ್ಮ ಎರಡು ಮೂರು ಸಾರಿ ಕೋಣೆಯ ಹತ್ತಿರ ಬಂದು ಹೋದಳು. ಅನಾರೋಗ್ಯದ ನಿಮಿತ್ತ ದಿಂದ ಏಳಲಿಲ್ಲವೋ ಎಂಬ ಶಂಕೆ ಆಕೆಯ ಕರುಳನ್ನು ಕೊಯ್ಯಿತು. ಬಾಗಿ ಲನ್ನು ತಟ್ಟಿ ಎಬ್ಬಿಸಲು ಬಂದಳು.

ಬಡ್ಡಿ, ಅಸಲು ಒಟ್ಟು ಸೇರಿ ಹನ್ನೆರಡು ಸಾವಿರ ರೂಪಾಯಿ ಯಾಯಿತು. ತನಗೆ ತಾನೇ ಸಂತೋಷಪಟ್ಟುಕೊಂಡು ಸೋಮಯ್ಯ ಮನಸ್ಸಿನಲ್ಲಿ ಅಂದುಕೊಂಡ—ತಂದೆ ತೀರಿಹೋದಾಗ ನಗದು ಏನೂ ಇರ ಲಿಲ್ಲ. ಈಗ ಕೈಯಲ್ಲಿ ಹತ್ತುಸಾವಿರ ರೂಪಾಯಿ ಇದೆ, ಇದು ಹನ್ನೆರಡು ಸಾವಿರ ರೂಪಾಯಿ ಸೇರಿಸಿದರೆ ಕಾಲುಲಕ್ಷದ ಧಣಿಯಾಗುವೆನು. ಇವನು ಹೀಗೆ ಯೋಚಿಸುತ್ತಿರುವಾಗ ಕದ ತಟ್ಟಿದ ಶಬ್ದವಾಯಿತು. ತಕ್ಷಣ ಲೆಕ್ಕದ ಪುಸ್ತಕಗಳನ್ನೆಲ್ಲ ಅವಸರದಲ್ಲಿ ಮುಚ್ಚಿಟ್ಟು ಬಾಗಿಲನ್ನು ತೆರೆದ.

ಹೊಸಲ ಹೊರಗೆ ದುಗ್ಗಮ್ಮ ನಗುತ್ತಾ ನಿಂತಿದ್ದಳು. ಸಂಪಿಗೆ ಮೊಗ್ಗಿನ ಮೈ, ದುಂಡು ಮುಖ, ಅಗಲವಾದ ಹಣೆ, ಉದ್ದ ಕೂದಲು ಹಣೆಯ ಮೇಲೆ ಕುಂಕುಮ, ತುರುಬಿನಲ್ಲಿ ಮಲ್ಲಿಗೆಯ ಹೂ ; ಕಾಲನ್ನು ಮುಟ್ಟಸೀರೆಯ ನರಿಗೆ. ಎತ್ತರಕ್ಕೆ ಸರಿಯಾದ ಮೈ, ಮೈಗೆ ಸರಿಯಾದ ಆಯುಕಟ್ಟು, ಕೆಂಪು ತುಟಿ ; ಮೊನೆಯಾಗಿರುವ ಮೂಗು ; ದಾಳಿಂಬರಿಯ

ಬೀಜದಂತಹ ಹಲ್ಲುಗಳಸಾಲು. ನಗುತ್ತಾ ಹೇಳಿದಳು, "ನಾನು ನಾಲ್ಕೈದು ಸಾರಿ ಬಾಗಿಲ ಹತ್ತಿರ ಬಂದು ಹೋದೆ. ಏನು, ಹುಷಾರಿಲ್ಲವೇ"?

"ಹುಷಾರಾಗಿದ್ದೀನಿ. ಏನೊ ಬರವಣಿಗೆ ಇತ್ತು, ಬರೆಯುತಿದ್ದೆ."

"ಊಟ ನಿದ್ದೆ ಬಿಟ್ಟು ಇಷ್ಟೊತ್ತು! ದನ ಕೊಟಗೆಗೆ ಬರುವ ಹೊತ್ತಾಯಿತು."

"ಹೊತ್ತು ಹೋಗಿದ್ದು ಗೊತ್ತಾಗಲಿಲ್ಲ. ಕಾಫಿ ಇಲ್ಲಿಗೆ ತೆಗೆದುಕೊಂಡು ಬಾ. ಕೆಲಸ ನೋಡಲು ತೋಟಕ್ಕೆ ಹೋಗಬೇಕು, ಹೊತ್ತಾಗಿ ಹೋಯಿತು."

"ತಿಂಡಿ ಇದೆ, ಒಳಗೆ ಬನ್ನಿ"

"ಇಲ್ಲಿಗೆ ತೆಗೆದುಕೊಂಡು ಬಾ."

ಯಾವಾಗಲೂ ಮುಖನೋಡಿ ನಗುನಗುತ್ತಾ ಮಾತನಾಡುತ್ತಿದ್ದ ಸೋಮಯ್ಯ ಹೆಂಡತಿಯ ಕಡೆ ಮುಖವನ್ನೆತ್ತದೆ ಮಾತನಾಡಿದ. ದುಗ್ಗಮ್ಮನಿಗೆ ಸೂಕ್ಷ್ಮ ತಿಳಿಯಿತು, ವಿಚಾರ ಗೊತ್ತಾಗಲಿಲ್ಲ. ಮನಸ್ಸಿಗೆ ಅಂದುಕೊಂಡಳು—ಗಂಡಸರ ಕಾರು ಬಾರು ಮನಸ್ಸಿನಲ್ಲೊಂದಿರುತ್ತದೆ, ಕೈಯ್ಯಲ್ಲೊಂದು ಮಾಡುತಿರುತ್ತಾರೆ. ಯಾವುದೋ ಬದುಕಿನ ಯೋಚನೆಯಿಂದ ಸಪ್ಪಗಿರಬೇಕು. ಆಕೆಯ ಮನಸ್ಸೆಲ್ಲ ಬೈಗಿನ ಹೊರಕೆಲಸದ ಮೇಲಿತ್ತು. ಯೋಚಿಸಲು ಹೆಚ್ಚು ಅವಕಾಶವಿರಲಿಲ್ಲ. ಅಲ್ಲಿಗೇ ಕಾಫಿ ತಿಂಡಿಯನ್ನು ತಂದಳು.

ಅಲ್ಲಿ ಕಾಫಿತಿಂಡಿ ಮುಗಿಸಿಕೊಂಡು ಸೋಮಯ್ಯ ತೋಟದ ಕಡೆ ಹೋಗಿ, ಆಳುಗಳನ್ನು ಚೆನ್ನಾಗಿ ಗದರಿಸಿದ. ಅವನ ಸ್ಥಿತಿಯನ್ನು ನೋಡಿ ಆಳುಗಳಿಗೆ ಆಶ್ಚರ್ಯವಾಯಿತು. ನಗುನಗುತ್ತಾ ಕೆಲಸ ಹೇಳುವವರು ಇಂದು ಕೆಲಸಮಾಡುತ್ತಿದ್ದರೂ ಗದರಿಸುವುದನ್ನು ನೋಡಿ ಆಳುಗಳೂ ವಿಸ್ಮಯ ಪಟ್ಟರು. ಅಲ್ಲಿಂದ ಗದ್ದೆ, ಹಾಡ್ಯೆ, ಹಕ್ಕಲು, ಒಡ್ಡು ಇತ್ಯಾದಿಗಳನ್ನು ಸುತ್ತಿ, ನೋಡಿಕೊಂಡು ಮನೆಗೆ ಹಿಂದಿರುಗುವಾಗ ಕಪ್ಪುಕವಿದಿತ್ತು. ನೆಟ್ಟಗೆ ಜಗುಲಿಗೆ ಬಂದಾಗ, ಅಲ್ಲಿ ಜಮುಖಾನದ ಮೇಲೊಂದು ಟೋಪಿಯನ್ನು ನೋಡಿದ. ಅದು ಕಳಸಯ್ಯನ ಟೋಪಿ. ಅಡುಗೆ ಮನೆಗೆ ಹೋದ. ಕಳಸಯ್ಯ ಮಣೆಯ ಮೇಲೆ ಕುಳಿತುಕೊಂಡು ತಂಗಿಯೊಂದಿಗೆ ಮಾತ

ನಾಡುತ್ತಿದ್ದ. ಸೋಮಯ್ಯ ಬಂದ ಮೇಲೆ ಯೋಗಕ್ಷೇಮದ ತರುವಾಯ ಮಳೆಬೆಳೆಗಳ ವಿಚಾರ ಮಾತು ಕಥೆ ನಡೆಯಿತು. ಊಟವಾದ ತರುವಾಯ ಎಲ್ಲರೂ ಮಲಗಿಕೊಂಡರು.

ಸೋಮಯ್ಯನಿಗೆ ನಿದ್ದೆ ಬರಲಿಲ್ಲ. ಹಲವು ರೀತಿಯಲ್ಲಿ ಯೋಚಿಸುತ್ತಾ ಹಾಸಿಗೆಯ ಮೇಲೆ ಹೊರಳಾಡಿದ: ಸಹಾಯ ಮಾಡುವುದಕ್ಕೆ ನಾನೇಕೆ ಹಣ ಕೊಡಬೇಕಾಗಿತ್ತು? ಕೊಟ್ಟು ಎಷ್ಟು ಪರ್ಷವಾಯಿತು? ಹಣವೂ ಇಲ್ಲ; ಬಡ್ಡಿಯೂ ಇಲ್ಲ. ಈಗ ಹನ್ನೆರಡುಸಾವಿರ ರೂಪಾಯಿಯಾಗಿದೆ. ಅದನ್ನು ಹೇಗೆ ತೀರಿಸುವರು? ಹಣ ಕೇಳದೆ ಹೋದರೆ ಕೊಡುವಹಾಗಿಲ್ಲ, ಕೇಳಿದರೆ ನಿಷ್ಠುರಕ್ಕೆ ಕಾರಣವಾಗಬೇಕು. ತೆಗೆದುಕೊಳ್ಳುವಾಗ ಅವರ ಧರ್ಮ; ಈಗ ನಮ್ಮದು. ಮನೆಗೆ ಅಮೀನ ಬಂದಿದ್ದಾನೆ. ಜಪ್ತಿಯಾಗುತ್ತದೆಂದು ವರ್ತಮಾನ ಬಂತು. ಅದೇ ಹೆಜ್ಜೆಯಲ್ಲಿ ಹೋಗಿ ಹಣಕ್ಕೆ ಜಾಮೀನು ಹೇಳಿ ಮನೆತನದ ಗೌರವವನ್ನುಳಿಸಿದೆ. ಅವರಿಗೆ ಆ ಧರ್ಮ, ಕರ್ಮ ಒಂದೂ ಬೇಡವೆ?

ಈ ಯೋಚನೆಯ ಹೊರಳಾಟದಲ್ಲಿ ಸೋಮಯ್ಯ ರಾತ್ರಿ ಕಳೆದ. ಬೆಳಗಿನ ಜಾವ ತಂಗಾಳಿಯಲ್ಲಿ ನಿದ್ದೆಬಂತು. ಕಣ್ಣು ತೆರೆದಾಗ ಬಿಸಿಲು ಬಂದಿತ್ತು. ಕಳಸಯ್ಯ ಕೋಟು, ಟೋಪಿ ಹಾಕಿಕೊಂಡು ಹೊರಡಲು ಸಿದ್ಧನಾಗಿ ನಿಂತಿದ್ದ. ಹಣದ ಮಾತನ್ನು ಎತ್ತಬೇಕೆಂದು ನಾಲ್ಕೈದು ಸಾರಿ ಸೋಮಯ್ಯ ಪ್ರಯತ್ನಪಟ್ಟ, ಎಂಜಲು ನುಂಗಿದ, ಮಾತು ಬಾಯಿಂದ ಹೊರಡಲಿಲ್ಲ. ಹಣ ಕೇಳುವ ಉದ್ದೇಶದಿಂದ ಬಾವಿ ಕಟ್ಟೆಯವರೆಗೂ ಕಳುಹಿಸುತ್ತಾ ಹೋದನೇವಿನಾ ಬಾಯಿಂದ ಹಣದಮಾತು ಬರಲಿಲ್ಲ.

ಕಳಸಯ್ಯನನ್ನು ಕಳುಹಿಸಿ, ಜೋಲು ಮುಖಹಾಕಿಕೊಂಡು ಜಗುಲಿಯ ಮೇಲೆ ಕುಳಿತುಕೊಂಡ. ದುಗ್ಗಮ್ಮ ಕಾಫಿಗೆ ಕರೆದಳು. ಸೋಮಯ್ಯ 'ಆ' 'ಹೂಂ' ಎನ್ನಲಿಲ್ಲ. ಕಾಫಿ ತಣ್ಣಗಾಗುವುದೆಂದು ಅಲ್ಲಿಗೆ ತಂದು ಕೊಟ್ಟು ತನ್ನ ಕೆಲಸದ ಮೇಲೆ ಹೋದಳು. ಸ್ವಲ್ಪ ಹೊತ್ತಿನ ತರುವಾಯ ಸೇರೆಗಾರರು ಬಂದು ಸೋಮಯ್ಯನನ್ನು ಕೇಳಿದರು, "ಆಳುಗಳು ಕೆಲಸಕ್ಕೆ ಬಂದಿದ್ದಾರೆ, ಯಾವ ಕೆಲಸ ಹೇಳುವುದು?"

" ನಿನ್ನೆ ತೋಟದ ಕೆಲಸ ಪೂರೈಸಲಿಲ್ಲ, ಎಷ್ಟು ಆಳು ಪೂರೈಸ ಲಿಕ್ಕೆ ಬೇಕು?"

" ಇಂದು ಹತ್ತು ಗಂಡಾಳು ಹೋದರೆ ಮುಗಿಯಬಹುದು."

" ಹಾಗಾದರೆ ಹತ್ತು ಗಂಡಾಳು ತೋಟಕ್ಕೆ ಮಣ್ಣು ಹಾಕಲು ಹೋಗಲಿ, ಹೆಣ್ಣಾಳುಗಳು ಮಧ್ಯಾಹ್ನದವರೆಗೂ ತೋಟದಲ್ಲಿ ಸೋಗೆ ಎಳೆಯಲಿ."

ಆಳುಗಳು ಕೆಲಸದಮೇಲೆ ಹೋದರು. ಸೋಮಯ್ಯ ಬಹಳ ಹೊತ್ತು ಯೋಚಿಸಿದ ತರುವಾಯ ಕಾಗದ, ಮಸಿ ತೆಗೆದುಕೊಂಡು ಕಾಗದ ಬರೆಯಲು ಕುಳಿತುಕೊಂಡ. ಕಾಗದ ಬರೆದ ತರುವಾಯ ಲಕೋಟೆಯೊಳಗಿಟ್ಟನು. ಆದರೆ ತಕ್ಷಣ ಕಳುಹಿಸಿ ಕೊಡಲು ಮನಸ್ಸೊಪ್ಪಲಿಲ್ಲ. ಮಧ್ಯಾಹ್ನ ಒಬ್ಬ ಆಳನ್ನು ಕರೆದು ಕಳಸಯ್ಯನಿಗೆ ಕೊಟ್ಟುಬರುವಂತೆ ಹೇಳಿದ. ಕಳಸಯ್ಯನ ಹೆಸರು ಕಿವಿಗೆ ಬೀಳುತ್ತಲೇ ದುಗ್ಗಮ್ಮ ಹೊರಗೆ ಬಂದು, " ಕೆಳಮನೆಗೆ ಯಾರು ಹೋಗುತ್ತಾರೆ ?" ಎಂದು ಕೇಳಿದಳು.

ಕಾಗದವನ್ನು ಆಳಿನ ಕೈಗೆ ಕೊಡುತ್ತಾ ಸೋಮಯ್ಯ ಹೇಳಿದ, " ಕಾಗದವೊಂದಿದೆ ಅದನ್ನು ತೆಗೆದುಕೊಂಡು ನಕ್ರ ಕೆಳಮನೆಗೆ ಹೋಗುತ್ತಾನೆ."

" ದರೆ ಮರದ ಹಲಸಿನ ಹಣ್ಣೆಂದರೆ ಅಣ್ಣಯ್ಯನಿಗೆ ಆಸೆ. ಇರು, ಮಧ್ಯಾಹ್ನ ತಿಂದುಕೊಂಡು ಹೋಗುವಿಯಂತೆ ಎಂದು ಬಹಳ ಹೇಳಿದೆ. ನಿಲ್ಲದೆ ಹೊರಟುಹೋದ. ನಕ್ರನನ್ನು ಹಿತ್ತಿಲಕಡೆ ಕಳುಹಿಸಿಕೊಡಿ, ಒಂದು ಹಲಸಿನ ಹಣ್ಣನ್ನು ತೆಗೆದುಕೊಂಡು ಹೋಗಿ ಕೊಟ್ಟುಬರಲಿ."

## ಏಳು

ಪತ್ರ ತಲಪಿಸಿ ನಕ್ರ ಕೆಳಮನೆಯಿಂದ ಬಂದ. ಸೋಮಯ್ಯ ನೆನಸಿದಂತೆ ಪ್ರತ್ಯುತ್ತರವೂ ಇಲ್ಲ, ಕಳಸಯ್ಯನೂ ಇಲ್ಲ. ನಾನೀಗ ದೊಡ್ಡ ಬಾಂಬೊಂದನ್ನೆಸೆದಿರುವೆನು. ಭಾರಿ ಶಬ್ದದೊಂದಿಗೆ ಅದು ಜೋರಾಗಿ ಸಿಡಿಯುವುದೆಂದು ಸೋಮಯ್ಯ ನೆನಸಿದ. ಅದು ಕೇವಲ ಅವನ ಭ್ರಾಂತಿ

ಯಾಯಿತು. ಒಂದುವಾರದ ವರೆಗೆ ಕೆಳಮನೆಯ ಸಮಾಚಾರದ ನಿರೀಕ್ಷಣೆಯಲ್ಲಿದ್ದ. ವಾರ ಕಳೆದು ಪಕ್ಷಕ್ಕೆ ಬಂದರೂ ಯಾವ ಸಮಾಚಾರವೂ ಬರಲಿಲ್ಲ. ಆಗಾಗ ಬರುತ್ತಿದ್ದ ಕಳಸಯ್ಯನ ಸುಳಿವೂ ಇಲ್ಲವಾಯಿತು. ತಾನೇ ಕೆಳಮನೆಗೆ ಹೋಗಿಬರುವ ಯೋಚನೆಯಲ್ಲಿರುವಾಗ ದುಗ್ಗಮ್ಮ ಇದ್ದಕ್ಕಿದ್ದ ಹಾಗೆ ಕೇಳಿದಳು, " ಹಣಕೊಡಲಿಕ್ಕೆ ಅಣ್ಣಯ್ಯನಿಗೆ ಕಾಗದ ಬರೆದಿದ್ದರೇನು ?"

ತಾನೆಸೆದ ಬಾಂಬು ತನ್ನ ಮನೆಯಲ್ಲೇ ಸಿಡಿಯುವುದೆಂದು ಸೋಮಯ್ಯ ಸ್ವಪ್ನದಲ್ಲಿಯೂ ಯೋಚಿಸಿರಲಿಲ್ಲ. ಹೆಂಡತಿಯ ಮಾತನ್ನು ಕೇಳಿ ದಿಗ್ಭ್ರಾಂತನಾಗಿ ಕೇಳಿದ, " ನಿನಗೆ ಹೇಗೆ ಗೊತ್ತು?''

" ನನಗೆ ಗೊತ್ತಾಯಿತು. ಅವೊತ್ತು ಬೆಳಗ್ಗೆ ಅಣ್ಣಯ್ಯ ಹೋಗಿದ್ದಾನೆ, ಮಧ್ಯಾಹ್ನ ಕಾಗದದೊಂದಿಗೆ ಜನ ಹೋಯಿತು. ಆಗಲೇ ನನಗೆ ಅನುಮಾನ ಬಂತು. ಕೇಳಬೇಕೆಂದು ಎರಡುಸಾರಿ ಯೋಚಿಸಿದೆ. ಆಮೇಲೆ ತನ್ನಷ್ಟಕ್ಕೆ ಗೊತ್ತಾಗುವುದೆಂದು ಸುಮ್ಮನಾದೆ.''

" ಅವಮಾನ ಬಂದು ಮನೆಯಲ್ಲಿ ಕುಳಿತಿದ್ದಾನೆ, ಕಷ್ಟಕಾಲವೆಂದು ಸಹಾಯಮಾಡಿದರೆ ಇದುವರೆಗೂ ಒಂದು ಕಾಸೂ ಕೊಡಲಿಲ್ಲ. ಎಷ್ಟು ದಿನ ಸುಮ್ಮನಿರುವುದು ?"

" ಆಗ ಸಹಾಯಮಾಡುವುದಕ್ಕೇಕೆ ಹೋದಿರಿ! ಸುಮ್ಮನಿರಬೇಕಿತ್ತು"

ದುಗ್ಗಮ್ಮನ ಮಾತನ್ನು ಕೇಳಿ ಸೋಮಯ್ಯ ಮೂಕನಾದ. ತನ್ನ ಹೆಂಡತಿಯ ಬಾಯಿಂದ ಇಂಥ ಮಾತು ಬಂತೇ ಎಂದುಕೊಂಡು ಹೇಳಿದ, " ನಿನ್ನ ಮಾತು ಸರಿ, ಈಗಿನ ಕಾಲದಲ್ಲಿ ಉಪಕಾರಕ್ಕೆ ಹೋಗಬಾರದು. ನಿಷ್ಠುರಕ್ಕೆ ಗುರಿಯಾಗುವವರು ಕೊಟ್ಟವರು."

" ಉಪಕಾರಕ್ಕೆಂದು ನೆನಸಿ ಕೊಟ್ಟಮೇಲೆ ಸುಮ್ಮನಿರಬೇಕು. ಅವರು ಕೊಟ್ಟಾಗ ತೆಗೆದುಕೊಳ್ಳಬೇಕು. ಹಣ ಅದರ ಬಡ್ಡಿ ಎಲ್ಲಾ ಸೇರಿಸಿ ಹನ್ನೆರಡು ಸಾವಿರ ರೂಪಾಯಿಗೆ ಕಾಗದ ಬರೆದಿರುವಿರಂತೆ. ಯಾವ ನಾದರೊಬ್ಬ ಪಠಾಣ ಸಾಲ ಕೊಟ್ಟಿದ್ದರೂ ಇಷ್ಟೇ ಮಾಡುತ್ತಿದ್ದ. ಅವನೂ ಬಡ್ಡಿಗೆ ಸಾಲ ಕೊಡುತ್ತಾನೆ, ನೀವು ಹಾಗೆಮಾಡಿದಿರಿ. ಇನ್ನು ಸಹಾಯ

ಎಲ್ಲಿಂದ ಬಂತು ? ಅವೊತ್ತು ಅಮಿಾನ ಮನೆಗೆ ಬಂದಾಗ ಮನೆ ಜಫ್ತಿ ಯಾಗಿದ್ದರೂ ಇಷ್ಟೆ ಆಗುತಿತ್ತು."

ವಿವೇಕವನ್ನು ಕಳೆದುಕೊಂಡವರೂ, ಮಾತಿನಲ್ಲಿ ಸೋತವರೂ ಸಾಧನಗಳೆಲ್ಲವನ್ನೂ ಬಿಟ್ಟು ಜಗಳಕ್ಕೆ ಸಿದ್ಧರಾಗುತ್ತಾರೆ. ಸೋಮಯ್ಯ ಅದಕ್ಕೆ ಅಪವಾದವಲ್ಲ. ಕೋಪದಿಂದ ಹೇಳಿದ, "ನಾನು ಧರ್ಮಕ್ಕೆ ಕೊಟ್ಟಿರಲಿಲ್ಲ, ಸಾಲ ಎತ್ತಿ ಕೊಟ್ಟದ್ದು, ಅವರು ನನಗೆ ಬಡ್ಡಿ ಬಿಡಲಿಲ್ಲ, ನಾನು ಬಿಡುವುದಕ್ಕೆ. ಹಾಗಾದರೆ ಬಿಟ್ಟುಬಿಡಬೇಕೆಂದು ನಿನ್ನ ಮನಸ್ಸೆ.''

ಸೋತ ಕಾಲದಲ್ಲಿ ಗಂಡಸು ಕೋಪಗೊಳ್ಳುವಂತೆ ಹೆಂಗಸು ಕಣ್ಣೀರು ಕರೆಯುತ್ತಾಳೆ.

ದುಗ್ಗಮ್ಮನ ಕಣ್ಣಲ್ಲಿ ನೀರು ತುಂಬಿ ಬಂತು; ಅಳು ಉಕ್ಕಿತು. ಬಿಗಿದ ಕಂಠದಲ್ಲಿ ಹೇಳಿದಳು, "ಆಗ ನನ್ನನ್ನು ಕೇಳಿ ಯಾರೂ ಕೊಡಲಿಲ್ಲ, ಈಗ ಬಿಡಿ ಎಂದು ನಾನೇಕೆ ಹೇಳಲಿ. ನಾನಿರುವವರೆಗೆ ಇನ್ನು ಕಾಗದ ಹೋಗಬಾರದು."

" ಸರಿ, ನೀನೇ ಕೊಡು "

ಮೋಡಕವಿದ ಆಕಾಶದಲ್ಲಿ, ಮೋಡಗಳ ಮಧ್ಯೆ ಸೂರ್ಯಕಿರಣಗಳು ತೋರಿ ಅಡಗುವಂತೆ ಮಲಿನವಾದ ದುಗ್ಗಮ್ಮನ ಮುಖದಮೇಲೆ ನಗುವಿನ ರೇಖೆ ಕಾಣಿಸಿದುವು. ನಗುಮುಖದಲ್ಲಿ ಹೇಳಿದಳು, "ನನ್ನನ್ನೇ ಕೊಟ್ಟಿರು ವಾಗ ನಾನೇನು ಕೊಡಲಿ? ಹಸುವನ್ನು ಮಾರಿದಾಗ ಅದರೊಂದಿಗೆ ಹಾಲನ್ನೂ ಮಾರಿದಹಾಗೆ."

ದುಗ್ಗಮ್ಮನ ಮಾತಿಗೆ ಸೋಮಯ್ಯನಿಗೂ ನಗುಬಂತು. ಇಂಥಾ ಸಮಯದಲ್ಲಿ ನಕ್ಕರೆ ಕೆಲಸ ಕೆಟ್ಟುಹೋಗುವುದೆಂದೂ, ಹೆಂಡತಿ ಇನ್ನೂ ಜೋರಾಗುವಳೆಂದೂ ಭಾವಿಸಿ, ನಗುವನ್ನು ತಡೆಯುತ್ತಾ ಹೇಳಿದ, "ಇದರ ಅರ್ಥ ಸಾಲ ಬಿಡಬೇಕೆಂದಾಯಿತು. ಹಸು ಬಂದಾಗ ಅದರ ಜೊತೆ ಹಾಲೂ ಬಂದಿದೆ ಎಂದು ನನಗೆ ಈಗ ತಿಳಿಯಿತು."

ಓರೆನೋಟದಿಂದ ಗಂಡನನ್ನು ನೋಡಿ ದುಗ್ಗಮ್ಮ ಮುಖ ಓರೆಮಾಡಿ ಕೊಂಡಳು. ಕಣ್ಣಿನ ಬಿಳುಪು, ನೀಲಿಯ ಕಾಂತಿ ಒಟ್ಟು ಬೆರೆತು, ತೋರಿ, ಮಾಯವಾಯಿತು. ಬಿಡಿಸಲಾರದ ಸಮಸ್ಯೆಯೊಂದು ತನ್ನಷ್ಟಕ್ಕೆ ತಾನೇ

ತಿಳಿದಂತೆ ಆಕೆಯ ಕಣ್ಣಿನ ಕಾಂತಿ ಸೋಮಯ್ಯನ ಹೃದಯವನ್ನು ನೇರವಾಗಿ ಹೊಕ್ಕಿತು. ಆಕೆಯ ಮುಖವನ್ನು ನೋಡುತ್ತಾ ಸೋಮಯ್ಯ ಸುಮ್ಮನೆ ನಿಂತುಕೊಂಡ. ದುಗ್ಗಮ್ಮ ಹೇಳಿದಳು, " ನನಗೆ ಅರ್ಥ ಗಿರ್ಥ ಗೊತ್ತಿಲ್ಲ. ಅದೆಲ್ಲ ಗೊತ್ತಿದ್ದರೆ ಇಲ್ಲಿ ಮುಸುರೆ ತಿಕ್ಕುತಿರಲಿಲ್ಲ."

ನೀತಿ ಕುಶಲನಾದ ಸೋಮಯ್ಯ ಮಾತನ್ನು ಬದಲಾಯಿಸಿದ, " ಪಟ್ಟಿಬೇಕು, ಒಂಕಿ ಬೇಕು, ಅಡ್ಡಿಕೆ ಬೇಕೆಂದು ಹೇಳುತ್ತಿರುವೆ, ಅವೆಲ್ಲ ಎಲ್ಲಿಂದ ಬರಬೇಕು ? "

ಇಲ್ಲಿಯೂ ಸೋಮಯ್ಯನ ಕಾಲು ಜಾರಿತು.

ನಗುನಗುತ್ತಾ ದುಗ್ಗಮ್ಮ ಬಾಣಬಿಟ್ಟಳು, "ಇದು ಬೇಕಾದರೆ ಒಳ್ಳೇ ನೆಪ. ಈ ಮನೆಗೆ ಬಂದು ಇಷ್ಟು ವರ್ಷವಾಯಿತು? ಉಡುವ ಸೀರೆ, ರವಕೆ, ಬಿಟ್ಟರೆ ಮದುವೆಯಲ್ಲಿ ಮಾಡಿಸಿದ ಕರಿಮಣಿ, ತಾಳಿ, ಗುಂಡನ್ನು ಬಿಟ್ಟರೆ ಇನ್ನು ಬೇರೆ ಚಿನ್ನದ ಚೂರಿನ ಮುಖ ನಾನು ಕಾಣಲಿಲ್ಲ. ಕರಿಮಣಿ ಗುಂಡು, ತಾಳಿ ಇಲ್ಲದೆ ಮದುವೆ ಆಗುವ ಹಾಗಿದ್ದರೆ ಅದನ್ನೂ ತರದೆ ಬರಿ ಕೈಯಲ್ಲಿ ಬರುತಿದ್ದಿರಿ ಅಂಥ ಕಾಣುತದೆ. ಇನ್ನು ಏನಿದ್ದರೂ ತೌರುಮನೆಯದು. ಕಾಯಿಲೆ ಬಿದ್ದಾಗ ಮನೆ, ಮಠ, ಗದ್ದೆ, ತೋಟವನ್ನೆಲ್ಲ ಬಿಟ್ಟು ತಿಂಗಳು ಗಟ್ಲೆ ಅಣ್ಣಯ್ಯ, ಅವ್ವ ನಮ್ಮನ್ನು ನೋಡಿಕೊಂಡರು. ಈಗ ಉದ್ದುದ್ದ ಕಾಗದ ತಿರುಗಾಡುತ್ತವೆ."

" ಒಬ್ಬರ ಕಷ್ಟದಲ್ಲಿ ಒಬ್ಬರು ನೇರವಾಗುವುದು ಮನುಷ್ಯರ ಧರ್ಮ. ಅದೇ ನೆಪ ಹೂಡಿ ಹಣವನ್ನೆಲ್ಲ ಬಿಡಬೇಕೆನ್ನುವಿಯೋ "

" ಹಣ ಬಿಡಲು ನಾನು ಹೇಳಲಿಲ್ಲ"

" ಮತ್ತೇನು ?"

" ಕೊಟ್ಟಾಗ ತೆಗೆದುಕ್ಕೊಬೇಕು"

" ಕೊಡಲಿಲ್ಲ ?"

" ಅದಕ್ಕೆ ನಾನೇನು ಹೇಳಲಿ ?"

ನೀನು ತಿಳಿಯದೆಯೂ ಮಾತನಾಡುತ್ತಿಲ್ಲ, ತಿಳಿದೂ ಮಾತನಾಡುತಿಲ್ಲ. ನಿನ್ನ ಹತ್ತಿರ ಮಾತನಾಡುವುದು ಕಷ್ಟ. ಇದುವರೆಗೂ ಅದಕ್ಕೋ

ಸ್ವರವೇ ಸುಮ್ಮನಿದ್ದಿದ್ದು. ಸಾಲ ಕೊಟ್ಟ ಬೇರೆ ಯಾರೂ ಸುಮ್ಮನಿರುತ್ತಿರಲಿಲ್ಲ."

"ಸಾಲವೋ ಮೂಲವೋ ಅವ್ರೊಂದು ಗೊತ್ತಿಲ್ಲ. ಮುಖವೆತ್ತಿ ನನಗೆ ತಿರುಗಾಡದಂತೆ ಮಾಡುತ್ತಿದ್ದೀರಿ" ಎಂದು ಹೇಳುತ್ತಿರುವಾಗ ತಾವರೆಯ ಬಿರುಮೊಗ್ಗಿನಂತಿದ್ದ ಆಕೆಯ ಕಣ್ಣು ಕೆಂದಾವರೆಯಂತಾದವು. ಬಾಳೆ ಹೆಡೆಯ ಮೇಲಿಂದ ಹನಿಗಳುದುರುವಂತೆ ದುಗ್ಗಮ್ಮನ ಕಣ್ಣುಗಳಿಂದ ಬಳಬಳನೆ ಕಣ್ಣೀರು ಸುರಿಯಿತು.

ಸಿಡಿಯುವ ಮದ್ದಿನ ಮೇಲೆ ತಣ್ಣೀರೆರೆಚಿದ ಹಾಗೆ ಕಣ್ಣೀರು ಕೆನ್ನೆಯ ಮೇಲೆ ಹರಿದು ಕೆಳಗೆ ಜಾರಿದಾಗ ಸೋಮಯ್ಯನ ತರ್ಕದ ಕೊಂಡಿ ಮುರಿಯಿತು. ಮಾತನ್ನು ಮುಂದುವರಿಸದೆ ಹಿಂದಕ್ಕೆ ಸರಿದ.

## ಎಂಟು

ಸಾಲದ ತಗಾದೆಯ ಪತ್ರ ಕೆಳಮನೆಗೆ ಹೋದಮೇಲೆ ಕಳಸಯ್ಯ ಎರಡುಸಾರಿ ತಲಮಕ್ಕಿಗೆ ಬಂದಿದ್ದ. ಒಂದುಸಾರಿ ತಂಗಿಯನ್ನು ನೋಡಲು ಇನ್ನೊಂದು ಸಾರಿ ಆಕೆಯನ್ನು ಕರೆದುಕೊಂಡು ಹೋಗಲು. ತಲಮಕ್ಕಿಯಲ್ಲಾಗಲಿ, ಕೆಳಮನೆಯಲ್ಲಾಗಲಿ ಯಾರಬಾಯಲ್ಲಿಯೂ ಸಾಲದ ಮಾತು ತಿರುಗಿ ಬರಲಿಲ್ಲ. ಕಳಸಯ್ಯ ತಿರುಗಿ ಒಂದು ಬೆಳೆಯನ್ನು ಮನೆಗೆ ತಂದ.

ಏನಾದರು ವಸೂಲನ್ನು ಈ ವರ್ಷವಾದರೂ ಕಟ್ಟಬಹುದೆಂಬ ಆಶೆ ಸೋಮಯ್ಯನಿಗಿತ್ತು. ಹಿಂದಿನಂತೆ ಈ ವರ್ಷವೂ ಬಂತು; ತಿರುಗಿ ಹೋಯಿತು; ಮುಂದಿನ ಸುಗ್ಗಿ ಬಂತು.

ಅಲ್ಪಸ್ವಲ್ಪವಾಗಿದ್ದರೆ ತೀರಿಸುವ ಯೋಚನೆ ಕಳಸಯ್ಯನಿಗಿರುತ್ತಿತ್ತು. ಇದು ಆನೆಗಾತ್ರದ ಬುತ್ತಿ; ಸಮುದ್ರಕ್ಕೆ ಉಪ್ಪು ಸುರಿದಂತೆ. ಆದ್ದರಿಂದ ಕಳಸಯ್ಯ ಏನನ್ನೂ ಕೊಡಲಿಲ್ಲ. ನಾನು ಇಷ್ಟು ಹಣ ಸುರಿದೆ ಒಂದು ವರ್ಷವಾದರೂ ತೆಗೆದುಕೊಂಡವರಿಗೆ ಕೊಡುವ ಮನಸ್ಸನ್ನು ದೇವರು ಕೊಡದೆಹೋದನಲ್ಲ ಎಂದುಕೊಂಡ ಸೋಮಯ್ಯ.

ತಿರುಗಾಟಕ್ಕೆ ಹೋಗಿದ್ದ ಸೋಮಯ್ಯ ಇದ್ದಕ್ಕಿದ್ದ ಹಾಗೆ ಕೆಳಮನೆಗೆ ಬಂದಿಳಿದ. ಅವನು ಬಂದಿರುವುದು ಅತ್ತೆಯ ಮನೆಗಾದರೂ ಯಾರಿಗೂ ಹಿತವಾಗಿರಲಿಲ್ಲ. ಅಳಿಯನಾಗಿ ಅತ್ತೆಯ ಮನೆಗೆ ಬಂದಿರಲಿಲ್ಲ.

ವಿಚಾರವನ್ನು ಸೋಮಯ್ಯ ಸಂಕ್ಷೇಪದಲ್ಲಿ ವಿವರಿಸಿ ಹೇಳಿದ "ಪತ್ರಕ್ಕೆ ವಾಯಿದೆ ಸಮೀಪಿಸಿದೆ. ನಾನು ಇದುವರೆಗೂ ಸುಮ್ಮನಿದ್ದೆ. ಯಾವುದಾದರೊಂದು ರೀತಿಯಲ್ಲಿ ಉಭಯತ್ರರಿಗೂ ನೋವಾಗದ ರೀತಿಯಲ್ಲಿ ತೀರ್ಮಾನಕ್ಕೆ ಬರುವುದು ಒಳ್ಳೆಯದು. ಪತ್ರಕ್ಕೆ ಇನ್ನೊಂದು ತಿಂಗಳು ವಾಯಿದೆ ಇದೆ. ಇನ್ನು ಇಪ್ಪತ್ತು ದಿನದೊಳಗೆ ಯಾವುದಾದರೊಂದು ರೀತಿಯಲ್ಲಿ ತೀರ್ಮಾನಿಸಿ ಕೋರ್ಟಿಗೆ ಹೋಗುವುದು ಇಬ್ಬರಿಗೂ ಒಳ್ಳೆಯದಲ್ಲ. ಅಲ್ಲಿಯವರೆಗೆ ಹೋಗಲು ಬಿಡಬೇಡಿ !

"ಇಷ್ಟು ಭಾರಿ ಸಾಲವನ್ನು ಈ ಉತ್ಪತ್ತಿಯಲ್ಲಿ ತೀರಿಸುವುದು ಸಾಧ್ಯವಲ್ಲ. ಆಸ್ತಿ ಇದೆ; ನಿಮ್ಮ ಸಾಲ ಇದೆ. ಈ ಆಸ್ತಿಯಿಂದ ನಮ್ಮ ಜೀವನವೂ ನಡೆಯಬೇಕು. ನಿಮಗೆ ದೇವರು ಬುದ್ಧಿಕೊಟ್ಟಂತೆ ಮಾಡಿ." ಎಂದು ಕಳಸಯ್ಯ ಒಂದು ತೀರ್ಮಾನಕ್ಕೆ ಬರುವ ಮನಸ್ಸಿನಿಂದ ಹೇಳಿದ.

ಸೋಮಯ್ಯ ಇಂಥಾ ಮಾತಿನ ನಿರೀಕ್ಷಣೆಯಲ್ಲಿರಲಿಲ್ಲ. ಕಳಸಯ್ಯನ ಮಾತನ್ನು ಕೇಳಿ ಅವನಿಗೆ ತುಂಬಾ ಸಂತೋಷವಾಯಿತು. ಅತ್ತೆಮನೆಯ ಆಸ್ತಿಯನ್ನು ತೆಗೆದುಕೊಂಡ ಅಪವಾದಕ್ಕೆ ಬೀಳುವ ಮನಸ್ಸಿಲ್ಲದಿದ್ದರೂ ಸುಲಭವಾಗಿ ವಿಪತ್ತಿನಿಂದ ಪಾರಾಗಲು ಸೋಮಯ್ಯನಿಗೆ ಮನಸ್ಸಿತ್ತು. ಕಳಸಯ್ಯನ ನಡವಳಿಕೆಗೆ ಸಂತೋಷಪಟ್ಟು ಸೋಮಯ್ಯ ಹೇಳಿದ, "ನಾನು ಕೊಟ್ಟಗಂಟೂ ಒಂದು ರೀತಿಯಲ್ಲಿ ಆಕಾರವಾಗಬೇಕು, ನಿಮ್ಮಗಳ ಜೀವನವೂ ನಿರ್ವಿಘ್ನವಾಗಿ ನಡಿಯಬೇಕು. ಆದ್ದರಿಂದ ಆಸ್ತಿಯಲ್ಲಿ ಸಮಅರ್ಧ ಭಾಗ ಸಾಲಕ್ಕೆ ಬಿಟ್ಟು ಮಿಕ್ಕ ಅರ್ಧವನ್ನು ನೀವು ಇಟ್ಟುಕೊಳ್ಳಿ"

"ಸರಿ, ಹಾಗೆಯೇ ಆಗಲಿ, ಹೇಗಾದರು ಋಣಪರಿಹಾರವಾದರೆ ಸಾಕು" ಎಂದನು ಕಳಸಯ್ಯ.

ತೀರ್ಮಾನದ ಮಾತು ಕತೆ ನೆಂಟಭಾವನಲ್ಲಿ ಆರಂಭವಾಯಿತು. ಹಕ್ಕಲು, ಹಾಡ್ಯ; ಹಳ್ಳ, ಹಾದಿ; ಗದ್ದೆ, ಗಣ್ಣ ಇವುಗಳನ್ನೆಲ್ಲ ಸುಲಭವಾಗಿ ವಿಂಗಡಿಸಿಕೊಂಡರು. ಅಡಿಕೆ ತೋಟವನ್ನು ವಿಂಗಡಿಸಿಕೊಳ್ಳುವಾಗ

ಒಂದು ದಿಣ್ಣೆಯಮೇಲೆ ಇಪ್ಪತ್ತೈದು ಅಡಕೆ ಮರದ ಜಾಗ ಉಳಿದು ಕೊಂಡಿತು. ಆ ದಿಣ್ಣೆ ಸೋಮಯ್ಯನ ಹಿಸ್ಸೆಗೆ ಬಂದರೆ ಬೇಲಿ, ನೀರಿಗೆ ಅನು ಕೂಲವಾಗುವುದು. ಕಳಸಯ್ಯನ ಹಿಸ್ಸೆಗೆ ಬಂದರೆ ಸಮ ಅರ್ಧ ಹಿಸ್ಸೆಯ ಲೆಕ್ಕಕ್ಕೆ ಸರಿಯಾಗುವುದು. ಬೇಲಿ, ನೀರಿಗೆ ತೊಂದರೆಯಾಗುವುದರಿಂದ ಆ ಇಪ್ಪತ್ತೈದು ಅಡಕೆ ಮರದ ಸ್ಥಳ ತನ್ನ ಭಾಗಕ್ಕೆ ಬಂದರೆ ಉತ್ತಮವೆಂಬ ಮನಸ್ಸು ಸೋಮಯ್ಯನಿಗೆ. ಮಾತು ನಡೆದಿದ್ದ ಅರ್ಧ ಆಸ್ತಿ ತೆಗೆದುಕೊಳ್ಳು ವುದಕ್ಕೆ, ನೀರೂ ಬೇಲಿ ಹೆಸರಿನಲ್ಲಿ ಇಪ್ಪತ್ತೈದು ಅಡಕೆ ಮರದ ಸ್ಥಳವನ್ನು ಸುಮ್ಮನೆ ಏಕೆ ಬಿಡಬೇಕೆಂದು ಕಳಸಯ್ಯ. ಅನುಕೂಲದ ಹೆಸರಿನಲ್ಲಿ ಇಬ್ಬ ರಲ್ಲಿಯೂ ವಾದ ಬುದ್ಧಿ ಅಂಕುರಿಸಿತು.

ಮಾತು ನಿಶ್ಚಯವಾದದ್ದು ಅರ್ಧ ಆಸ್ತಿ ಕೊಡುವುದಕ್ಕೆ, ಹೆಚ್ಚಿಗೆ ಏಕೆ ಕೊಡಬೇಕೆಂದು ಕಳಸಯ್ಯ. ಐದುಸಾವಿರ ರೂಪಾಯಿ ಬೆಲೆ ಬಾಳುವ ಆಸ್ತಿಯನ್ನೂ ನಾನು ಹದಿನೈದು ಸಾವಿರ ರೂಪಾಯಿ ಸಾಲಕ್ಕೆ ಹಾಕಿಕೊಳ್ಳು ತಿರುವುದು ಆಸ್ತಿ ಸಂಪಾದಿಸುವುದಕ್ಕಲ್ಲ, ಮನುಷ್ಯ ಬೇಕೆಂಬ ಉದ್ದೇಶದಿಂದ. ಬೇಲಿ ನೀರಿನ ಅನುಕೂಲಕ್ಕೋಸ್ಕರ ಇಪ್ಪತ್ತೈದು ಅಡಕೆ ಮರದ ಜಾಗ ಬಿಡಲು ಇವರು ಇಷ್ಟು ಚೌಕಾಸಿ ಮಾಡುತ್ತಾರಲ್ಲ ಎಂದು ಸೋಮಯ್ಯ. ನಿರ್ಧಾರಕ್ಕಾಗಿ ಮಾತು ಕಥೆ ಬೆಳೆದಷ್ಟು ಇಬ್ಬರು ದೂರವಾಗುತ್ತಾ ಬಂದರು. ಕಳಸಯ್ಯ ಹೇಳಿದ, "ಊರಿನ ಮೇಲೆ ಈ ರೀತಿ ವಿಭಾಗಿಸಿ ಕೊಂಡಿದ್ದ ತೋಟಗಳೆಷ್ಟಿಲ್ಲ.

" ಇರಬಹುದು, ಆದರೆ ವ್ಯಾಜ್ಯವಾಗುತಿರುವ ಮನೆಗಳೆಷ್ಟು ಬೇಕು? ಇಂಥಾ ಚಿಕ್ಕಪುಟ್ಟ ವ್ಯಾಜ್ಯಕ್ಕೆ ಮನೆತನವನ್ನೇ ಹಾಳುಮಾಡಿಕೊಂಡವ ರೆಷ್ಟು ಮಂದಿ ?" ಎಂದು ಸೋಮಯ್ಯ ಪ್ರತಿ ವಾದಿಸಿದ.

" ವ್ಯಾಜ್ಯಕ್ಕೆ ಒಂದು ನೆಪ ಸಾಕು, ಜಮಾನು ಒಂದು ಮೈಲಿ ದೂರ ವಿದ್ದರೂ ಆಗುವ ವ್ಯಾಜ್ಯ ತಪ್ಪುವುದಿಲ್ಲ. ಸಾಲ ಕೊಟ್ಟವರು ಎಷ್ಟು ಜನ ಕೋರ್ಟಿಗೆ ಹೋಗಿಲ್ಲ ? ಆದರೂ ಅವರು ಸಾಲ ಕೊಡುವುದಿಲ್ಲವೆ ?"

"ನಮ್ಮ ನಿಮ್ಮ ಕಾಲದಲ್ಲಿ ನಾವು ಚೆನ್ನಾಗಿರಬಹುದು. ನಮ್ಮ ಕಾಲಾನಂತರ ವ್ಯಾಜ್ಯಕ್ಕೆ ಕಾರಣವಾಗಬಹುದು. ಆದ್ದರಿಂದ ನಮ್ಮ ಕಾಲ ದಲ್ಲಿಯೇ ಅದನ್ನು ಸರಿಪಡಿಸಿಕೊಳ್ಳುವುದು ಒಳ್ಳೆಯದು."

ಇಬ್ಬರ ನಾಗದ ಭೂಮಿಯೂ ಫಲವತ್ತಾಗಿತ್ತು. ಹೊಸ ಹೊಸ ಬೀಜಗಳನ್ನು ಬಿತ್ತಿದರು. ಅವು ಹುಲುಸಾಗಿ ಬೆಳೆದವು. ಒಂದೂವರೆ ದಿನ ಕಳೆದರೂ ಒಂದು ನಿರ್ಧಾರಕ್ಕೆ ಬರಲಿಲ್ಲ. ಕೊನೆಯಲ್ಲಿ ಇಬ್ಬರೂ ತಮಗೆ ಬೇಕಾದ ಒಬ್ಬೊಬ್ಬ ಆಪ್ತರನ್ನು ಕರೆದುಕೊಂಡು ಬಂದು, ಅವರಿಬ್ಬರ ನಿರ್ಣಯದನುಸಾರ ನಡೆಯುತಕ್ಕದೆಂದು ತೀರ್ಮಾನ ಮಾಡಿಕೊಂಡರು. ಸೋಮಯ್ಯ ತಲವ.ಕ್ಕಿಗೆ ಹೊರಟ. ಅವನು ಮನೆ ತಲಪುವ ಮೊದಲು ಕೆಳಮನೆಯಲ್ಲಿ ನಡೆದ ವಿದ್ಯಮಾನಗಳೆಲ್ಲ ತಲಮಕ್ಕಿ ತಲಪಿದವು. ದುಗ್ಗಮ್ಮ ಒಲೆಯನ್ನೂ ಹತ್ತಿಸದೆ ಹಾಸಿಗೆ ಹಿಡಿದು ಅಳುತ್ತಾ ಮಲಗಿದ್ದಳು. ಜಯ ಹೊಂದಿದ ವೀರನಂತೆ ಸೋಮಯ್ಯ ಹೆಬ್ಬಾಗಿಲನ್ನು ದಾಟಿ ಮನೆಯೊಳಗೆ ಕಾಲಿಟ್ಟ. ಅವನ ಸ್ವಾಗತಕ್ಕೆ ಯಾರೂ ಕಾದು ನಿಂತಿರಲಿಲ್ಲ. ಅಪಜಯ ಹೊಂದುವ ಸಮಯದಲ್ಲಿ ರಾಜಪೂತರೆಲ್ಲ ಅಗ್ನಿಪ್ರವೇಶಮಾಡಿ ಅರಮನೆಯನ್ನು ಸ್ಮಶಾನವನ್ನಾಗಿ ಮಾಡುವಂತೆ ಇಡೀ ಮನೆ ತನ್ನನ್ನು ನುಂಗಲು ಬರುತಿದೆಯೋ ಎನ್ನುವ ರೀತಿಯಲ್ಲಿ 'ಗಾಳ್' ಎನ್ನುತಿತ್ತು.

ಮನೆಗೆ ಬಂದಮೇಲೆ ಹೆಂಡತಿ ಅನ್ನ ನೀರಿಲ್ಲದೆ ಅಳುತ್ತಾ ಮಲಗಿರುವ ವಿಚಾರ ತಿಳಿದರೂ ಸೋಮಯ್ಯ ಆಕೆಯನ್ನು ಮಾತನಾಡಿಸಲಿಲ್ಲ. ಹೆಂಡತಿಗೆ ಇದಕ್ಕಿಂತಲೂ ಹೆಚ್ಚಿನ ಅಪಮಾನ ಯಾವುದು? ದುಗ್ಗಮ್ಮನಿಗೆ ಅಭಿಮಾನ ಮುರಿದ ಹಾಗಾಯಿತು.

ಹೆಂಡತಿಯ ಮಾನಾಪಮಾನ, ಶೌರ್ಯ, ಪ್ರತಾಪಗಳಿಗೆ ಗಂಡ ಕಾರಣ. ಗಂಡನೇ ಹೆಂಡತಿಯನ್ನು ಕಡೆಗಣಿಸುವಾಗ ಆಕೆ ಜೀವಿಸಿ ತಾನೇ ಏನು ಸಾರ್ಥಕ? ದುಗ್ಗಮ್ಮನಿಗೆ ಹೆಚ್ಚು ದುಃಖವಾಯಿತು.

ಆಳುಗಳು ಕೆಲಸದಿಂದ ಹಿಂದಿರುಗುತ್ತಿದ್ದರು. ಸೋಮಯ್ಯ ಅವರೊಂದಿಗೆ ಮಾತನಾಡುತ್ತಾ ನಿಂತಿದ್ದ. ಕೆಲಸಮಾಡುವುದನ್ನು ಬಿಟ್ಟು ಶೇಷಮ್ಮ "ಅಯ್ಯ, ಅಯ್ಯ" ಎಂದು ಕೂಗುತ್ತಾ ಓಡಿಬಂದಳು. ಮಾತನಾಡುತ್ತಾ ನಿಂತಿದ್ದ ಸೋಮಯ್ಯ ಗಾಭರಿಯಿಂದ "ಏನೆ" ಎಂದು ಕೇಳಿದ.

ಅತ್ಯಂತ ಉದ್ವೇಗ ಮತ್ತು ಗಾಭರಿಯಿಂದ ಶೇಷಮ್ಮ ಹೇಳಿದಳು, "ಅಮ್ಮನನ್ನು ನೋಡಿ ಬನ್ನಿ, ಏನೋ ಆಗಿದೆ"

ಅಲ್ಲಿದ್ದವರೆಲ್ಲ ಒಳಗೆ ನುಗ್ಗಿದರು; ದುಗ್ಗಮ್ಮನಿಗೆ ಪ್ರಜ್ಞೆ ಇರಲಿಲ್ಲ. ಜ್ವರ ಉಕ್ಕುತ್ತಿತ್ತು, ಕಣ್ಣು ಮೇಲೇರಿತ್ತು. ತಲೆಯಮೇಲೆ ನೀರನ್ನೆರಚಿ, ಬಾಯೊಳಗೆ ಕಾಫಿಯನ್ನು ಹೊಯ್ದರು. ಸ್ವಲ್ಪ ಕಾಫಿ ಹೊಟ್ಟೆಯೊಳಗೆ ಹೋಗಿತ್ತು ಅಷ್ಟರಲ್ಲಿ ಪ್ರಜ್ಞೆಬಂತು. ಗಂಟಲ ಹತ್ತಿರದವರೆಗೆ ಹೋಗಿರುವ ಕಾಫಿಯನ್ನು ಹಿಂದಕ್ಕೆ ತುಪ್ಪಿ ಎದ್ದು ಕೂರಲು ಪ್ರಯತ್ನಪಟ್ಟಳು. ಸೋಮಯ್ಯ ಆಕೆಯನ್ನು ಹಿಡಿದುಕೊಂಡು ಮಲಗಿಸುತ್ತಾ ಹೇಳಿದ, "ನೀನು ಈ ರೀತಿ ಅನ್ನ ನೀರನ್ನು ಬಿಟ್ಟುಕೊಂಡು ಉಪವಾಸ ಮಾಡುತ್ತಿರುವುದಾದರೂ ಏತಕ್ಕೆ?"

"ನಾನು ಜೀವಿಸಿ ಏನಾಗಬೇಕು? ಈ ಮನೆ ಹೊಕ್ಕಿದ ಅಪರಾಧಕ್ಕೆ ಹುಟ್ಟಿದಮನೆ ನಾಶಮಾಡುತಿದ್ದೇನೆ. ಅದು ಹಾಳಾಗುವ ಮೊದಲು ಭಗವಂತ ನನ್ನನ್ನು ಒಪ್ಪಿಸಿಕೊಳ್ಳಲಿ."

"ಮನಸ್ಸಿಗೆ ಬಂದಂತೆ ಯೋಚಿಸುತ್ತಿದ್ದರೆ ಯಾರೇನು ಮಾಡಿಯಾರು? ನಾನು ಕೆಳಮನೆಗೆ ಹೋಗಿದ್ದೆ ತಪ್ಪಾದರೆ ನಾನಿನ್ನು ತಿರುಗಿ ಆ ಕಡೆ ಮುಖಹಾಕುವುದಿಲ್ಲ."

"ಹೋಗಿದ್ದು ತಪ್ಪೆಂದು ಯಾರು ಹೇಳುವುದಿಲ್ಲ. ಜಮೀನನ್ನೆಲ್ಲ ಸಾಲಕ್ಕೆ ಮುರಾ ಹಾಕಿಕೊಂಡರಂತೆ."

"ಬರಿ, ಅಂತೆ ಕಂತೆ ಮಾತನಾಡುತಿದ್ದರೆ ಯಾರೇನು ಮಾಡಿಯಾರು? ಒಂದನ್ನೂ ತಿಳಿದುಕೊಳ್ಳದೆ ಮಾತನಾಡುತಿರುವಿ."

"ಹಾಗಾದರೆ ಸುಳ್ಳೋ"

"ನಾಳೆ ಅಥವಾ ನಾಡಿದ್ದು ಕಳಸಯ್ಯ ಬರುತ್ತಾರೆ, ಅವರನ್ನೇ ಕೇಳಿ ಎಲ್ಲಾ ತಿಳಿದುಕೋ."

"ಹಾಗಾದರೆ ನೀವು ಅವರ ಜಮೀನನ್ನು ತೆಗೆದುಕೊಳ್ಳಲಿಲ್ಲ?"

"ಇಲ್ಲ"

"ಖಂಡಿತ?"

"ಖಂಡಿತ"

"ಹಾಗಾದರೆ ಕಾಫಿ ತೆಗೆದುಕೊಂಡು ಬರಲಿ."

## ಒಂಭತ್ತು

ತನ್ನ ಪರದಲ್ಲಿ ಪಂಚಾಯಿತಿಗೆ ಕಳಸಯ್ಯ ತನ್ನ ಹೆಂಡತಿಯ ಅಣ್ಣ ಮಂಜಪ್ಪನನ್ನು ಕರೆದುಕೊಂಡು ತಲಮಕ್ಕಿಗೆ ಬಂದ. ಸಾಲಕೊಡಲು ವಾಗ್ದಾನಮಾಡಿದ ಸೋಮಯ್ಯನ ಆಪ್ತನೊಬ್ಬನು ಅವರ ಪರದಲ್ಲಿ ಬಂದ. ಪಂಚಾಯಿತಿ ಕುಳಿತು ಎರಡು ದಿನದವರೆಗೆ ನಡೆಯಿತು. ಯಾವ ನಿರ್ಣಯಕ್ಕೂ ಬರಲಿಲ್ಲ. ಪಂಚಾಯಿತರ ಊಟೋಪಚಾರದಲ್ಲಿ ದುಗ್ಗಮ್ಮನಿದ್ದಳು.

ಹೆದ್ದಾರಿಯಂತಿದ್ದ ಭಾವ ನೆಂಟನ ಮತಭೇದವನ್ನು ಪಂಚಾಯಿತರು ಡೊಂಕಾಗಿ ತಿರುಗಿಸಿದರು. ನೆಂಟ ಭಾವನ ಮನೋಭಾವವನ್ನು ತಿಳಿಯದೆ ಹಾಗೆಮಾಡಿದರೊ ಬೇಕಾಗಿ ಮಾಡಿದರೋ ಹೇಳುವುದು ಕಷ್ಟ. ಮಾತನಾಡುತ್ತಾ ಸೋಮಯನ ಆಪ್ತ ಹೇಳಿದ, "ಇಪ್ಪತ್ತೈದು ಅಡಕೆಮರದ ಜಾಗದಿಂದ ಸೋಮಯ್ಯನವರು ಮನೆಗೆ ಕಳಸ ಹಾಕುವುದಿಲ್ಲ. ಇವತ್ತಿನವರೆಗಿನ ಬಡ್ಡಿಸೇರಿ ಹದಿನೈದು ಸಾವಿರ ರೂಪಾಯಿ ಆಗುತ್ತದೆ. ಇಡೀ ಆಸ್ತಿಯನ್ನು ಹದಿನೈದು ಸಾವಿರ ರೂಪಾಯಿಗೂ ಯಾರು ತೆಗೆದುಕೊಳ್ಳುವುದಿಲ್ಲ. ತಮ್ಮ ಸಂಬಂಧಿಯೂ ಬದುಕಬೇಕು, ತಾವೂ ಬದುಕಬೇಕೆಂಬ ಯೋಚನೆಯಿಂದ ಅವರು ಅರ್ಧ ಆಸ್ತಿಗೊಪ್ಪಿಕೊಂಡಿದ್ದು. ಸುಮನೆ ತಕರಾರು ಮಾಡುವುದರಿಂದ ಪ್ರಯೋಜನವಿಲ್ಲ. ಯಾವುದಾದರೊಂದು ನಿರ್ಣಯಕ್ಕೆ ಬರೋಣ."

ಕಳಸಯ್ಯನಿಗೆ ಬಿಸಿ ತಟ್ಟಿತು, ಮಂಜಪ್ಪನಿಗೆ ಬೇಸರಿಕೆಯಾಯಿತು. ತಡೆಯಲಾರದೆ ಮಂಜಪ್ಪ ಹೇಳಿದ, "ಇಪ್ಪತ್ತೈದು ಅಡಕೆಯ ಮರದ ಜಾಗಕ್ಕೆ ಇಷ್ಟೊಂದು ರಾಮಾಯಣವಾಗುತಿದೆ, ಇಡೀ ಆಸ್ತಿಯನ್ನು ಹದಿನೈದು ಸಾವಿರ ರೂಪಾಯಿಗೂ ಯಾರೂ ಕೇಳುವುದಿಲ್ಲ ಎಂದು ಹೇಳುತಿದ್ದೀರಿ. ಸೋಮಯ್ಯನವರು ನಗದು ಪಾವತಿಮಾಡಿದ್ದು ಕೇವಲ ಐದು ಸಾವಿರ ರೂಪಾಯಿ. ಅದೇ ಬೆಳೆಯುತ್ತಾ ಹದಿನೈದು ಸಾವಿರ ರೂಪಾಯಿಗೆ ಏರಿದೆ. ಐದು ಸಾವಿರವನ್ನು ಹದಿನೈದಕ್ಕೆ ಏರಿಸಿದ ಹಾಗೆ ಅವರ ಇಡೀ ಆಸ್ತಿಗೆ ಹದಿನೈದು ಸಾವಿರ ರೂಪಾಯಿ ಬೆಲೆ ಕಟ್ಟುವುದು."

ಬೀರುವಿನಿಂದ ಲೆಕ್ಕದ ಪುಸ್ತಕವನ್ನು ತೆಗೆದು ಪಂಚಾಯಿತರ

ಮುಂದೆಸೆದು ಸೋಮಯ್ಯ ಹೇಳಿದ, " ಲೆಕ್ಕ ಇದರಲ್ಲಿದೆ, ಬೇಕಾದವರು ನೋಡಬಹುದು."

" ಲೆಕ್ಕ ಸುಳ್ಳೆಂದು ಯಾರೂ ಹೇಳಲಿಲ್ಲ. ಮಾತಿಗೆ ಮಾತಾಡಿದ್ದು. ನಮಗೆಲ್ಲ ಬೇಕಾದ್ದು ಇಬ್ಬರಿಗೂ ಒಂದು ರಾಜಿ ಪಂಚಾಯಿತಿ '' ಎಂದು ಮಂಜಪ್ಪ ರಾಗ ಎಳೆದ.

ಸೋಮಯ್ಯನ ಅಪ್ತನಿಗೆ ಮಂಜಪ್ಪನ ರಾಗ ತಲೆನೋವನ್ನುಂಟು ಮಾಡಿತು. ಹಣೆಯನ್ನು ತಿಕ್ಕಿಕೊಳ್ಳುತ್ತಾ ಅವನು ಹೇಳಿದ, " ಸೋಮಯ್ಯ ನವರ ಭಾಗಕ್ಕೆ ಬಂದ ಗದ್ದೆಯೆಲ್ಲ ಒಂದೆ ಮಕ್ಕಿ ಇಲ್ಲ, ಜೌಗು. ಗದ್ದೆ ಹೇಗೂ ಕಳಸಯ್ಯನವರಿಗೆ ಒಳ್ಳೆಯದು ಸಿಕ್ಕಿದೆ. ಬೇಲಿ, ನೀರಿನ ಅನು ಕೂಲಕ್ಕೋಸರ ತೋಟದಲ್ಲಿಯಾದರು ಅಷ್ಟು ಸ್ಥಳ ಬಿಟ್ಟರೆ ಒಳ್ಳೆಯದು."

" ಗದ್ದೆ ಸೋಮಯ್ಯನವರ ಇಚ್ಛೆಯ ಮೇರೆಗೆ ಅವರಿಗನುಕೂಲ ವಾದುದೆಂದು ತೋರಿದನ್ನೇ ಬಿಟ್ಟಿದೆ. ಅದೇ ರೀತಿ ಅಡಕೆ ತೋಟ ಕಳ ಸಯ್ಯನ ಇಚ್ಛೆಗನುಕೂಲವಾಗಿ ಬಿಟ್ಟುಕೊಡಿ" ಎಂದನು ಮಂಜಪ್ಪ.

ಸೋಮಯ್ಯ ಹೇಳಿದ, " ಭಾವನ ಇಚ್ಛೆಯ ಪ್ರಕಾರವೇ ತೋಟ ಕೊಟ್ಟಿದೆ. ನೆಟ್ಟಗೆ ಬೇಲಿಮಾಡುವುದಕ್ಕನುಕೂಲವಾಗುವಂತೆಯೂ ನಾಳೆ ನಮ್ಮ ನಮ್ಮೊಳಗೆ ಮನಸ್ತಾಪ ಉಂಟಾಗದಿರುವಂತೆಯೂ ಆ ಇಪ್ಪತ್ತೈದು ಅಡಕೆ ಮರದ ಜಾಗ ಕೇಳುತಿರುವುದು."

'' ಕಳಸಯ್ಯನವರಿಗೆ ಆ ಇಪ್ಪತ್ತೈದು ಅಡಕೆ ಮರದ ಸ್ಥಳದಮೇಲೆ ಅಷ್ಟು ಆಶೆಯಿದ್ದರೆ ಸೋರೆ ಹಾಳಿಯನ್ನು ಸೋಮಯ್ಯಗೌಡರ ಭಾಗಕ್ಕೆ ಬಿಟ್ಟುಕೊಡಲಿ'' ಎಂದನು ಸೋಮಯ್ಯನ ಆಪ್ತ.

ಈ ಮಾತನ್ನು ಕೇಳಿ ಮಂಜಪ್ಪ ಕಳಸಯ್ಯನ ಮುಖ ನೋಡಿದ, ಸೋಮಯ್ಯ ತನ್ನ ಅಪ್ತನ ಮುಖ. ಕಳಸಯ್ಯ ಹೇಳಿದ, " ಮನಸ್ಸಿನ ಮಾತು ಬಾಯಿಗೆ ಬಂತಲ್ಲ. ವಾಗ್ದಾನ ಮಾಡಿದವರೇ ಈಗ ಮುರಿಯುತಿ ರುವವರು ಅವರೇ ಅರ್ಧ ಆಸ್ತಿಯನ್ನು ಕೇಳಿದರು, ನಾನು ಕೊಡಲು ಸಿದ್ಧನಾದೆ. ಅದರ ಮೇಲೆ ಒಂದು ಮೊಳಕೊಡಲು ಸಾಧ್ಯವಿಲ್ಲ.

ಕಳಸಯ್ಯನನ್ನು ತಡೆಯುತ್ತಾ ಮಂಜಪ್ಪ ಹೇಳಿದ, " ಒಂದೇ ಸಾರಿಗೆ ದುಡುಕಿ ಮಾತನಾಡಬಾರದು. ಮಾತಿಗೆ ಕುಳಿತಮೇಲೆ ಮಾತನ್ನು

ಮಾತಿನಲ್ಲಿಯೇ ಸೋಲಿಸಬೇಕು, ಅದು ಪಂಚಾಯಿತಿ. ಸೋಮಯ್ಯನ ಕಡೆಗೆ ತಿರುಗಿ ಮಂಜಪ್ಪ ಮಾತನ್ನು ಮುಂದುವರಿಸಿದ, “ ಬೇಲಿ, ನೀರಿಗೆ ಅನುಕೂಲವಾಗುವುದಕ್ಕೋಸ್ಕರ ಆ ಇಪ್ಪತ್ತೈದು ಮರದ ಜಾಗವನ್ನು ಕೊಡಬೇಕೆಂದು ಇದುವರೆಗೂ ವಾದಿಸುತ್ತಾ ಬಂದಿರಿ. ಕಳಸಯ್ಯನ ಗದ್ದೆಗೆ ಬರುವ ನೀರೆಲ್ಲ ಆ ಹಾಳಿಯಮೇಲೆ ಬರಬೇಕು, ಮತ್ತು ಬೇಲಿಯನ್ನು ನೆಟ್ಟಗೆ ಕಟ್ಟುವುದಕ್ಕಾಗುವುದಿಲ್ಲ. ಆ ಹಾಳಿಯನ್ನು ಹೇಗೆ ಕೊಡುವುದಕ್ಕಾಗುತ್ತದೆ? ಬೇಕಾದರೆ ಮಕ್ಕಿಯಲ್ಲಿ ಐದುಕೊಳಗದ ಗಣ್ಣವೊಂದನ್ನು ಕೊಡಬಹುದು ”

ಸೋಮಯ್ಯ ತನ್ನ ಅಪ್ಪನನ್ನು ನೋಡಿದ, ಅಪ್ಪ ಸೋಮಯ್ಯನನ್ನು ನೋಡಿದ. ಕಳಸಯ್ಯ ಮಧ್ಯೆ ಬಾಯಿಹಾಕಿದ, “ ಯಾರೂ ಮಾತನ್ನು ತಪ್ಪಿ ಹೋಗಬಾರದು. ಮಾತು ನಡೆದಿದ್ದು ಅರ್ಧ ಆಸ್ತಿಕೊಡುವುದಕ್ಕೆ ಅದನ್ನು ತಪ್ಪಿ ನಾನು ಹೋಗುವುದಿಲ್ಲ.''

ಹೀಗೆ ಹೊರಗೆ ಪಂಚಾಯಿತಿಯಾಗುತಿತ್ತು ಒಳಗೆ ರುಚಿ ರುಚಿಯಾದ ಅಡುಗೆ ಸಿದ್ಧವಾಗುತಿತ್ತು''

## ಹತ್ತು

ಹೋಳಿಗೆ, ಪಾಯಸ, ಚಿತ್ರಾನ್ನ, ಕೋಸಂಬರಿಯ ಭರ್ಜರಿಯ ಊಟ, ಹೊಟ್ಟೆತುಂಬಾ ಊಟ ಮಾಡಿದ್ದುದರಿಂದ ಯಾರಿಗೂ ತಿರುಗಿ ಕುಳಿತುಕೊಂಡು ಮಾತನಾಡಲು ಮನಸಿಲ್ಲದುದರಿಂದ ಊಟವಾದ ತರುವಾಯ ತಿರುಗಿ ಪಂಚಾಯಿತಿ ಸೇರಲಿಲ್ಲ. ಅನಿವಾರ್ಯವೆಂದು ಎಲ್ಲರೂ ತಮ್ಮ ತಮ್ಮ ಮನೆಗೆ ಹೊರಟರು. ಒಂದು ತೀರ್ಮಾನಕ್ಕೆ ಬಾರದ ಪ್ರಯುಕ್ತ ಸಂಧಾನವು ಮುರಿದಹಾಗಿತ್ತು. ನಿರ್ಧಾರಕ್ಕಾಗಿ ತಿರುಗಿ ಸೇರುವ ಮಾತು ಕಥೆಯಲ್ಲಿ ಎಲ್ಲರೂ ತಲಮುಕ್ಕಿಯಿಂದ ಹೊರಟರು.

ಮಾತು ಕಥೆಯ ನಿಮಿತ್ತ ಹೊರಡುವಾಗ ಕಳಸಯ್ಯ ತಂಗಿಯನ್ನು ಮಾತನಾಡಿಸಲಿಲ್ಲ. ಮಾತು ಕಥೆಯಲ್ಲಿ ಬಹಳ ದೂರದ ವರೆಗೆ ಬಂದುದರಿಂದ ಹಿಂತಿರುಗಿ ಹೋಗುವುದು ಸಾಧ್ಯವಾಗದಿದ್ದುದರಿಂದ ತಂಗಿಯನ್ನು

ನೋಡದ ಕೊರತೆಯಲ್ಲಿಯೇ ಮನೆ ಮುಟ್ಟಿದ. ಮನೆ ತಲಪಿದ ತರುವಾಯ ಪಂಚಾಯಿತಿಯ ಮಾತು ಕಥೆಯನ್ನೆಲ್ಲ ಮರೆತು ತನ್ನ ಕೆಲಸದಲ್ಲಿ ನಿರತನಾದ.

ಸೋಮಯ್ಯ ಹದಿನೈದು ದಿನದ ವರೆಗೆ ಕಳಸಯ್ಯನ ನಿರೀಕ್ಷಣೆಯಲ್ಲಿದ್ದ ಕಳಸಯ್ಯನೂ ಇಲ್ಲ, ಸಮಾಚಾರವೂ ಇಲ್ಲ. ಪತ್ರಕ್ಕೆ ವಾಯಿದೆ ಮೂರು ದಿನವಿತ್ತು. ಪತ್ರದ ವಾಯಿದೆ ಕಳೆಯುವುದಕ್ಕೋಸ್ಕರ ಹೀಗೆ ಆಟವಾಡುತ್ತಿರುವನೆಂದು ಸೋಮಯ್ಯ ನಿಶ್ಚೈಸಿದ. ಕೊಳ್ಳಿಯಿಂದ ತಲೆ ತುರಿಸಿಕೊಂಡಂತೆ ಈ ಪಂಚಾಯಿತಿಯಿಂದ ಊರುಮನೆಯಿಲ್ಲ. ಪತ್ರಕ್ಕೆ ವಾಯಿದೆ ಹೋದಮೇಲೆ ಏನು ಮಾಡುವಹಾಗಿಲ್ಲವೆಂದು ನೆಟ್ಟಗೆ ಕೋರ್ಟಿಗೆ ಹೋಗಿ ಕಳಸಯ್ಯನ ಮೇಲೆ ದಾವ ಹಾಕಿದ. ಕೋರ್ಟಿನಿಂದ ಸಮನ್ ಬಂದಾಗ ದಾವಾಹಾಕಿದ ವಿಚಾರ ಕಳಸಯ್ಯನಿಗೆ ತಿಳಿಯಿತು. ಇದರಿಂದ ಅವನು ಜಗ್ಗಲೂ ಇಲ್ಲ ಹಿಗ್ಗಲೂ ಇಲ್ಲ. ಎಂದಿನಂತೆ ತನ್ನ ಕೆಲಸ ಕಾರ್ಯದಲ್ಲಿ ನಿರತನಾದ. ಹೀರಂಗಿನ ದಿವಸ ಕೋರ್ಟಿಗೆ ಹಾಜರಾಗಿ ತಕರಾರು ಹಾಕಿದ. ಇವನ ತಕರಾರನ್ನು ನೋಡಿ ಸೋಮಯ್ಯ ಕಿಡಿ ಕಿಡಿ ಯಾದ. ಕಳಸಯ್ಯನ ತಕರಾರು ಕೈಕಾಲುಗಳಿಲ್ಲವಾದ್ದರಿಂದ 'ಡಿಕ್ರಿ'ಯಾಗುವುದು ಸ್ವಲ್ಪ ತಡವಾಯಿತೇ ವಿನಾ ಮತ್ತಾವ ಪ್ರಯೋಜನವೂ ಆಗಲಿಲ್ಲ.

ತನ್ನ ಹಿತ, ಶ್ರೇಯಸ್ಸಿನ ಮುಂದಾಲೋಚನೆಯಿಂದ ಜನರು ಸಾಲ ಮಾಡುತ್ತಾರೆ. ಸಾಲ ಕೊಡುವವರು, ಸಾಲ ತೆಗೆದುಕೊಳ್ಳುವವರ ಹಿತ ರಕ್ಷಣೆಗಳಿಂತಲೂ ತಮ್ಮ ಅಸಲು ಮತ್ತು ಬಡ್ಡಿಯ ಭದ್ರತೆಯಲ್ಲಿ ತತ್ಪರರಾಗಿರುತ್ತಾರೆ. ಹಣದ ಸುರಕ್ಷತೆ ಸಾಲ ಕೊಟ್ಟವರಿಗೆ ಬೇಕಾದ್ದು. ಹಣ ತೆಗೆದುಕೊಂಡವನನ್ನು ತಿಂದು ತಾನು ಬಲವಾಗುವಷ್ಟು ಹಣದ ಸುರಕ್ಷತೆ ಬಲಿಷ್ಠವಾಗಿರುತ್ತದೆ. ಆಧುನಿಕ ಪ್ರಪಂಚದಲ್ಲಿ ಮನುಷ್ಯನಿಗೆ ಬೆಲೆಯಿಲ್ಲ; ಹಣವೇ ಸರ್ವಸ್ವ. ಹಣ ಉಳಿಯಬೇಕು, ಬೆಳೆಯಬೇಕು; ಬೆಳೆದು ಕೊಂಡವನನ್ನು ನೊಣೆಯಬೇಕು. ಹಣವಂತನು ಹಣದ ಬಡ್ಡಿಯಿಂದ ಸ್ವರ್ಗ ಸುಖವನ್ನು ಅನುಭವಿಸಬೇಕು; ಸಾಲ ತೆಗೆದುಕೊಂಡವನು ಗೇದು ಗೇದು ಅವನ ಹೊಟ್ಟೆಯನ್ನು ತುಂಬಬೇಕು. ಇದೇ ಹಣದ ಪ್ರಪಂಚ.

ಸರಕಾರದ, ಕಾನೂನು ಹಣವಂತನನ್ನೂ ಅವನ ಹಣವನ್ನೂ ಕಾಪಾಡು ತ್ತವೆ. ಅದಕ್ಕೆ ಕೋರ್ಟಿದೆ, ಪೋಲೀಸಿದೆ. ರೈತ ಕಷ್ಟಪಟ್ಟು ಬೇಸಾಯ ಮಾಡಿ, ಸರಿಯಾಗಿ ಬೆಳೆಯಾಗದೆ ಹೋದರೆ ಆಗ ಅವನು ಕೇವಲ ಭಾಗ್ಯಹೀನನಾಗುತ್ತಾನೆ. ಅವನ ಪರಿಶ್ರಮಕ್ಕೆ ಬೆಲೆಯಿಲ್ಲ ; ಅವನಿಗೆ ರಕ್ಷಣೆಯಿಲ್ಲ. ಹಣದ ರಕ್ಷಣೆಗೆ ಕೋರ್ಟು, ಕಛೇರಿ, ಪೋಲೀಸು ; ಬೆಳೆ ಮತ್ತು ಅದರ ರಕ್ಷಣೆಗೆ ಕೇವಲ ರೈತನ ಅವನ ಹಣೆಬರಹ.

ಕಳಸಯ್ಯನ ಮೇಲೆ ಹಣಕ್ಕೆ 'ಡಿಕ್ರಿ'ಯಾದ್ದರಿಂದ ಭೋಗ್ಯ ಪತ್ರ ದಲ್ಲಿ ನಮೂದಿಸಿರುವ ಪ್ರಕಾರ ಕೆಳಮನೆಯ ಜಮೀನಿನ ಅಧಿಕಾರವೆಲ್ಲ ಸೋಮಯ್ಯನಿಗೆ ಬಂತು. ಕಳಸಯ್ಯ, ಸೋಮಯ್ಯ ಕೇವಲ ಇಪ್ಪತ್ತೈದು ಅಡಕೆ ಮರದ ಸ್ಥಳಕ್ಕೆ ಕಾದಾಡಿದ್ದರು. ಈಗ ಕಳಸಯ್ಯ ಎಲ್ಲವನ್ನೂ ಕಳ ಕೊಂಡ ; ಸೋಮಯ್ಯ ಎಲ್ಲವನ್ನೂ ಹೊಂದಿದ.

ಕಾಗದ ಪತ್ರ, ಬರವಣಿಗೆಯ ಪ್ರಾಬಲ್ಯದಿಂದ ಸೋಮಯ್ಯ ಕೋರ್ಟಿ ನಲ್ಲಿ 'ಡಿಕ್ರಿ' ಪಡೆದ. ಜಮೀನನ್ನು ಸ್ವಾಧೀನಪಡಿಸಿಕೊಳ್ಳಬೇಕಾಗಿತ್ತು. ಇದಕ್ಕೆ ಎರಡು ಮಾರ್ಗಗಳಿವೆ : ಮೊದಲನೆಯದು, ಪೋಲೀಸಿನವರ ಸಹಾಯದಿಂದ ಜಮೀನನ್ನು ಸ್ವಾಧೀನಪಡಿಸಿಕೊಳ್ಳುವುದು; ಎರಡನೆಯದು ತನ್ನ ಆಳುಗಳ ಮೂಲಕ ಸ್ವಾಧೀನ ಹೊಂದುವುದು. ಎರಡನೆಯ ವಿಧಾನ ದಲ್ಲಿ ಅವನು ಅಡ್ಡಿಮಾಡದೆ ಸುಮ್ಮನಿದ್ದರೆ, ತನ್ನ ಅನುಭವಕ್ಕೆ ಬಂದ ಹಾಗಾಯಿತು. ಅಡ್ಡಿ ಬಂದರೆ ದುಂಡಾವರ್ತಿಯ ಹೆಸರಿನಲ್ಲಿ ಪೋಲೀಸಿ ನವರ ಸಹಾಯ ಪಡೆಯಬಹುದು.

ಮೊದಲನೆಯ ಮಾರ್ಗದಲ್ಲಿ ಸಾರ್ವಜನಿಕರ ಸಹಾನುಭೂತಿ ಸಾಲ ಮಾಡಿದವನ ಕಡೆಗಿರುತ್ತದೆ; ಎರಡನೆಯ ಮಾರ್ಗದಲ್ಲಿ ಸಾಲ ಕೊಟ್ಟವನ ಕಡೆಗಿರುತ್ತದೆ. ಆದ್ದರಿಂದ ಸೋಮಯ್ಯ ಎರಡನೆಯ ಮಾರ್ಗವನ್ನು ಹಿಡಿದ.

ಅಡುಗೆ ಮನೆಯಲ್ಲಿ ಒಲೆಯ ಮುಂದೆ ತನ್ನ ಜೀವನವನ್ನು ಕಳೆದ ದುಗ್ಗಮ್ಮನಿಗೆ ಕೋರ್ಟಿನ ಮಹಿಮೆಯಾಗಲಿ, ಪ್ರತಾಪವಾಗಲಿ ತಿಳಿಯದು. ಪಂಚಾಯಿತಿಯ ಮೂಲಕ ರಾಜಿಗೆ ಪ್ರಯತ್ನವಾಗುತಿರುವುದನ್ನು ತಿಳಿ ದಿದ್ದಳು. ರಾಜಿಮಾಡಿಸಿ ಇಬ್ಬರನ್ನೂ ಸುಖವಾಗಿರಿಸುವಂತೆ ಅನೇಕ ಸಾರಿ

ದೇವರನ್ನು ಪ್ರಾರ್ಥಿಸಿದ್ದಳು. ರಾಜಿ ಪಂಚಾಯಿತಿ ತನ್ಮೊಳಗಾಗದಿದ್ದುದರಿಂದ ಕೋರ್ಟಿಗೆ ಹೋಗಿರುವರೆಂದು ಆಕೆ ನೆನಸಿದ್ದಳು. ಕೋರ್ಟಿನ ವ್ಯವಹಾರವು ಆಕೆಯ ಮನಸ್ಸಿಗೆ ನೆಮ್ಮದಿಯನ್ನು ತರದಿದ್ದರೂ ಗಂಡನಿಗೆ ಬೆರಳೆತ್ತಿ ಇಂಥಾ ಕೆಲಸವನ್ನು ಮಾಡುತಿರುವಿರೆಂದು ತೋರಿಸಿ ಹೇಳಲು ತಿಳಿಯದು. ಇಲ್ಲಿ ನೆಂಟಭಾವನ ವ್ಯವಹಾರ ಕೋರ್ಟಿನಲ್ಲಿ 'ಡಿಕ್ರಿ' ಪಡೆದು ಜಮೀನನ್ನು ಸ್ವಾಧೀನ ಪಡಿಸಿಕೊಳ್ಳುವವರೆಗೂ ಬೆಳೆಯಿತು.

## ಹನ್ನೊಂದು

ಬೇಸಗೆಯ ಗರ್ಭದಲ್ಲಿರುವ ಕಾರ್ಮುಗಿಲು ಮುಂಗಾರನ್ನು ತಂದಿತು ಮೋಡ, ಮಿಂಚುಗಳ ಅಬ್ಬರದೊಂದಿಗೆ ನದಿ ತೊರೆಗಳು ಉಬ್ಬರದಿಂದ ಹರಿದವು. ಕೆಲವುಕಡೆ ಸಸಿನಟ್ಟು ಪೂರೈಸಿತ್ತು, ಕೆಲವುಕಡೆ ಪೂರೈಸಲು ತರಾತುರಿಯಿಂದ ಕೆಲಸ ಸಾಗುತ್ತಿತ್ತು.

ಕೆಳಮನೆಯವರ ಗದ್ದೆ ಪೂರೈಸಿ ಒಂದು ವಾರವಾಗಬೇಕಿತ್ತು. ಹೂಡುವ ಎತ್ತೊಂದರ ಕಾಲು ಮರದ ಬೇರಿಗೆ ಸಿಕ್ಕಿ ಮುರಿದು ಜೊತೆಗೆ ಮತ್ತೊಂದು ಎತ್ತನ್ನು ಹುಡುಕಿ ತರುವುದು ತಡವಾದ್ದರಿಂದ ಗದ್ದೆಗಿಳಿಯುವುದು ನಿಧಾನವಾಯಿತು. ಸಸಿ ನಟ್ಟಿ ಬೇಗ ಪೂರೈಸಿ ತೋಟಕ್ಕೆ ಔಷಧಿ ಹಾಕಬೇಕೆಂಬ ತರಾತುರಿಯಲ್ಲಿ ಕೆಳಮನೆಯವರ ವ್ಯವಸಾಯ ಸಾಗುತ್ತಿತು.

ನಿತ್ಯವೂ ಮುಂಜಾನೆ ಏಳುತ್ತಿದ್ದ ದುಗ್ಗಮ್ಮ ಹೊತ್ತಾಗಿ ಎದ್ದು ಅಡುಗೆ ಮನೆಯಲ್ಲಿ ಒಲೆಯ ಮುಂದೆ ತಲೆ ಹಿಡಿದುಕೊಂಡು ಆಕಳಿಸುತ್ತಾ ಕುಳಿತುಕೊಂಡಳು. ಮುಸುರೆ ತಿಕ್ಕುತ್ತಿದ್ದ ಶೇಷಮ್ಮ ಕೇಳಿದಳು, "ಅಮ್ಮ ಬೆಳಗ್ಗೆ ಬೆಂಕಿ ಏಕೆ ಕಾಯಿಸುತಿದ್ದೀರಿ?"

ಕೊಳ್ಳಿಯನ್ನು ಮುಂದೆ ಹಾಕಿ, ಆಕಳಿಸುತ್ತಾ ದುಗ್ಗಮ್ಮ ಹೇಳಿದಳು "ಯಾಕೋ ಇಂದು ಮನಸ್ಸಿಗೆ ಹುಷಾರಿಲ್ಲ; ಏಳಲು ಮನಸ್ಸೇ ಬರಲಿಲ್ಲ. ಕೆಳಮಯಲ್ಲೆಲ್ಲ ಹೇಗಿದ್ದಾರೋ, ಅಣ್ಣಯ್ಯ ಹೇಗಿದ್ದಾನೋ. ಈಚೆಗೆ ವರ್ತಮಾನವೇ ಇಲ್ಲ. ಮುಂಚೆ ಎಲ್ಲಿಯಾದರು ಈ ಕಡೆ ಬಂದು ಹೋಗುತಿರುತಿದ್ದ. ಎಲ್ಲಾ ಗದ್ದೆಗಿಳಿದಿರಬೇಕು, ಅವರ ಕೆಲಸ ಅವರಿಗೆ ಹೆಚ್ಚಾಗಿದೆ.

ನನ್ನ ಮನಸ್ಸು ಅಣ್ಣಯ್ಯ ಬರುತ್ತಾನೆ ಎನ್ನುತಿದೆ. ಹಾಗೆ ಆಗಿದ್ದರೆ ಚೆನ್ನಾಗಿರುತ್ತಿತ್ತು."

ಮುಸುರೆ ತಿಕ್ಕುತ್ತಿದ್ದ ಶೇಷಮ್ಮ ತಲೆ ಬಗ್ಗಿಸಿಕೊಂಡಲ್ಲಿಯೇ ಹೇಳಿದಳು. "ಮಳೆಗಾಲದಲ್ಲಿ ಎಲ್ಲರಿಗೂ ಬೇಜಾರು. ಹೆಣ್ಣು ಮಕ್ಕಳಿಗೆ ಅಣ್ಣತಮ್ಮಂದಿರಿಲ್ಲದ ಮೇಲೆ ಬದುಕಬಾರದು. ತಾಯಿತಂದೆ ಇಲ್ಲದಿದ್ದರೂ ಇರಬಹುದು ಅಣ್ಣ ತಮ್ಮಂದಿರಿಲ್ಲದ ಮೇಲೆ ಬಾಳು ದಂಡ."

"ತಮ್ಮನನ್ನು ನೋಡುವ ಪುಣ್ಯ ಪಡೆದುಕೊಂಡು ಬಂದಿಲ್ಲ. ದೇವರು ಕೊಟ್ಟ ಒಬ್ಬ ಅಣ್ಣನಿದ್ದಾನೆ. ಭಗವಂತನು ಅವನನ್ನು ಸುಖವಾಗಿಟ್ಟರೆ ಅಷ್ಟೆ ಸಾಕು" ಎಂದಳು ದುಗ್ಗಮ್ಮ.

ಇಬ್ಬರಿಗೂ ಮಾತು ಕಥೆ ನಡೆಯುತಿರುವಾಗ ಸೋಮಯ್ಯ ಅಡುಗೆ ಮನೆಗೆ ಬಂದ. ಅವರ ಮಾತು ಅಲ್ಲಿಗೆ ನಿಂತಿತು. ದುಗ್ಗಮ್ಮನ ಹತ್ತಿರ ಬಂದು ಕೇಳಿದ, "ಮೈ ಸರಿಯಿಲ್ಲವೆ?"

"ಮೈ ಕೈಯೆಲ್ಲ ನೋವು, ಮನಸ್ಸಿಗೆ ಬೇಜಾರು"

"ಜ್ವರ ಬಂದಿದೆಯೋ ?"

"ಜ್ವರವೂ ಇಲ್ಲ ಏನೂ ಇಲ್ಲ."

ಇಷ್ಟು ವಿಚಾರಿಸಿಕೊಂಡು ಸೋಮಯ್ಯ ಜಗುಲಿಗೆ ಬಂದ.

ಕಳಸಯ್ಯನ ಅಡಕೆ ತೋಟಕ್ಕೆ ಲೋರ್ಪ ಹಾಕಲು ಸೋಮಯ್ಯ ತನ್ನ ಆಳುಗಳನ್ನು ಕೆಳಮನೆಗೆ ಕಳುಹಿಸಿದ್ದ. ಒಂದು ರೀತಿಯಲ್ಲಿ ಹೆಂಡತಿ ಮುಂಚೆ ಏಳದಿದ್ದುದು ಅನುಕೂಲವಾಗಿತ್ತು. ಆಳುಗಳೆಲ್ಲ ಕೆಳಮನೆಗೆ ಹೋದ ಬಹಳ ಹೊತ್ತಿನಮೇಲೆ ದುಗ್ಗಮ್ಮ ಎದ್ದು ಬೆಂಕಿಯ ಮುಂದೆ ಕುಳಿತಿದ್ದಳು. ಆಕೆಗೆಲ್ಲಿಯಾದರು ವಿಚಾರ ಗೊತ್ತಾಗಿದೆಯೇ ಎಂದು ತಿಳಿದುಕೊಳ್ಳಲು ಸೋಮಯ್ಯ ಅಡುಗೆ ಮನೆಗೆ ಬಂದಿದ್ದ. ಹೆಂಡತಿಯ ಬಾಯಿಯಿಂದ ಯಾವ ವಿಚಾರ ಬಾರದಿದ್ದುದರಿಂದ ಹೊರಗೆ ಬಂದು ಜಗುಲಿ ಇಳಿದು ಗದ್ದೆ ಕಡೆಗೆ ಹೋದ.

ಹತ್ತು ಕೊಳಗದ ಗಣ್ಣೆವೊಂದನ್ನು ಒಂದು ಸಾಲುಮಾಡಿ ಎರಡನೆಯ ಸಾಲಿಗೆ ಕಳಸಯ್ಯ ಎತ್ತನ್ನು ತಿರುಗಿಸುವಷ್ಟರಲ್ಲಿ ಜನವೊಂದು ಬಂದು

ಹೇಳಿತು, "ತಲಮಕ್ಕಿಯಿಂದ ಜನರು ಬಂದು ತೋಟದಲ್ಲಿ ಔಷಧಿ ಹಾಕು ತಿದಾರೆ"

ಸಮಾಚಾರ ಕೇಳಿದ ತಕ್ಷಣ ಕಳಸಯ್ಯನ ಕಳೆಯೇರಿ ಮರುಕ್ಷಣ ಕಾವಲಿಯಂತೆ ಕಪ್ಪಗಾಯಿತು. ಅನೇಕ ರೀತಿ ಯೋಚಿಸಿದರೂ ಕಳಸಯ್ಯ ನಿಗೆ ಸರಿಯಾಗಿ ಅರ್ಥವಾಗಲಿಲ್ಲ. ಎದೆ ಮಾತ್ರ ಜೋರಾಗಿ ಬಡಿದು ಕೊಳ್ಳುತ್ತಿತ್ತು. ಎತ್ತುಗಳನ್ನು ಗದ್ದೆಯಲ್ಲಿಯೇ ನಿಲ್ಲಿಸಿ ಅದೆ ಹೆಜ್ಜೆಯಲ್ಲಿ ತೋಟಕ್ಕೆ ಹೋದ. ಕೆಲವರು ಮರ ಹತ್ತಿಕೊಂಡು ಕೊನೆಗಳಿಗೆ ಲೋಷ್ಟ ಹಾಕುತ್ತಿದ್ದಾರೆ. ಕೆಲವರು ಔಷಧಿ ತುಂಬಿ ಮೇಲಕ್ಕೆ ಕೊಡುತ್ತಿದ್ದಾರೆ. ಅವರು ಬಂದು ಬಹಳ ಹೊತ್ತಾಗಿದೆ ಎಂಬುದು ಅಲ್ಲಿಗೆ ಹೋದ ಮೇಲೆ ಗೊತ್ತಾಯಿತು. ಹಂಡೆ ಕಡಾಯಿಗಳಲ್ಲಿ ಲೋಷ್ಟ ತುಂಬಿತ್ತು. ಲೋಷನನ್ನು ತಲಮಕ್ಕಿಯಿಂದಲೇ ಮಾಡಿಕೊಂಡು ಬಂದಿದ್ದರು. ಕಳಸಯ್ಯನನ್ನು ನೋಡಿ ಆಳುಗಳು ತಾವು ಮಾಡುತ್ತಿರುವ ಕೆಲಸವನ್ನು ಬಿಟ್ಟು ಗಾಭರಿಯಿಂದ ಅವ ನನ್ನು ನೋಡುತ್ತಾ ನಿಂತುಕೊಂಡರು.

ಘಟನಾಸ್ಥಳಕ್ಕೆ ಬಂದ ತರುವಾಯ ಕಳಸಯ್ಯನಿಗೆ ವಿಷಯವು ಸ್ಪಷ್ಟವಾಗಿ ತಿಳಿಯಿತು. ಮಾತನಾಡದೆ ನಿಂತು ನೋಡುತ್ತಿದ್ದರೂ ಮೈಯಲ್ಲಿ ರಕ್ತ ಕುದಿಯುತ್ತಿತ್ತು. ವಿವೇಕದ ದ್ವಾರ ಮುಚ್ಚುತಿದ್ದಿತು. ಬಾಯಿ, ಕೈ ಗಳೆರಡೂ ನಾನು ಮುಂದೆ, ತಾನು ಮುಂದೆ ಎಂದು ಸ್ಪರ್ಧೆ ಹೂಡಿದ್ದವು. ಮನಸ್ಸು ಇನ್ನೂ ನಿರ್ಧಾರಮಾಡಿರಲಿಲ್ಲ. ಬಾಯಿ ಮಾತನಾಡೋಣ ವೆನ್ನುತ್ತಿತ್ತು. ವಿಚಾರವೆಲ್ಲ ಚೆನ್ನಾಗಿ ಗೊತ್ತಾಗಿರುವಾಗ ಅವರೊಂದಿಗೆ ಮಾತನಾಡಿ ಪ್ರಯೋಜನವೇನು? ಆಮೇಲಾದರೂ ನನ್ನಿಂದ ಸಹಾಯ ಹೊಂದಲೇ ಬೇಕು, ಆದ್ದರಿಂದ ಮುಂಚೆಯೇ ತೆಗೆದುಕೋ ಎಂದು ಕೈ ಹೇಳುತ್ತಿತ್ತು.

ಅಡಕೆ ಮರವನ್ನು ಹತ್ತಿಕೊಂಡು ಔಷಧಿ ಹಾಕುತ್ತಿದ್ದವನು ಕೆಳಗಿನ ದೃಶ್ಯವನ್ನು ಚೆನ್ನಾಗಿ ನೋಡಿ ಗಟ್ಟಿಯಾಗಿ ಹೇಳಿದ, "ಎಲ್ಲ ನಿಂತುಕೊಂಡು ಏನುಮಾಡುತಿದ್ದೀರಿ? ಔಷಧಿ ತುಂಬಿ ಮೇಲಕ್ಕೇರಿಸಿ."

ಕಳಸಯ್ಯ ಒಬ್ಬ, ಅವರು ಹಲವರು; ತೋಟ ಕಳಸಯ್ಯನದು,

ಬಂದವರು ಸೋಮಯ್ಯನ ಕಡೆಯವರು. ಎರಡು ಕಡೆಯಲ್ಲಿಯೂ ಭಯ ಎರಡು ಕಡೆಯಲ್ಲಿಯೂ ಪ್ರತೀಕಾರ.

" ಬಂದೂಕನ್ನು ತಂದು ನಿಮ್ಮನ್ನೆಲ್ಲ ಸುಟ್ಟುಹಾಕಿಬಿಡುತ್ತೇನೆ " ಎಂದು ಹೇಳುತ್ತಾ ಕಳಸಯ್ಯ ಮನೆಯ ಕಡೆ ತಿರುಗಿದ.

ಬೈಯಬಹುದು, ಹೆಚ್ಚೆಂದರೆ ಹೊಡೆಯಬಹುದೆಂಬ ನಿರೀಕ್ಷಣೆಯಲ್ಲಿ ಆಳುಗಳಿದ್ದರು. ಇದು ಎರಡೂ ಅಲ್ಲ, ಮೂರನೆಯದು. ಅವರು ಬಂದಿರುವುದು ಕೂಲಿ ಕೆಲಸಕ್ಕೆ. ಕಳಸಯ್ಯನಿಗೆ ಹಾಗಲ್ಲ. ಅವನ ಪೂರ್ವೀಕರು ಬೆವರನ್ನೂ ರಕ್ತವನ್ನೂ ಚೆಲ್ಲಿ ಬೆಳೆಸಿದ ತೋಟ. ಆ ತೋಟದ ಪ್ರತಿಯೊಂದು ಮರವೂ ಆತನ ಪೂರ್ವೀಕರ ಕೀರ್ತಿಯನ್ನು ಗಾನಮಾಡುತ್ತಿತ್ತು. ಆ ತೋಟದ ನೆರಳಿನಲ್ಲಿ ಇವನ ತಾಯಿ ತಂದೆ ದುಡಿದಿದ್ದರು ; ವಿಶ್ರಾಂತಿ ಹೊಂದಿದ್ದರು, ಸಂಪಾದಿಸಿದ್ದರು. ತಾಯಿ ತಂದೆ ಕೆಲಸ ಮಾಡುವಾಗ ಕಳಸಯ್ಯ ಬಾಳೆ ಮರದಡಿಯಲ್ಲಿ ಕುಳಿತು ಆಟವಾಡಿ ಬೆಳೆದಿದ್ದ ; ಬೆಳೆದು ದೊಡ್ಡವನಾದ ಮೇಲೆ ತನ್ನ ಪೂರ್ವಿಕರಂತೆ ಇಂದಿನವರೆಗೂ ದುಡಿದಿರುವನು. ಹೆಂಡತಿ, ಮಕ್ಕಳಂತೆ ಅವನ ಜೀವನದಲ್ಲಿ ತೋಟವೂ ಒಂದು ಸ್ಥಾನವನ್ನು ಆಕ್ರಮಿಸಿ ಕೊಂಡಿದೆ. ತಾಯಿ ತಂದೆ, ಹೆಂಡತಿ, ಮಕ್ಕಳ ಮೇಲೆ ವಿಪತ್ತು ಬಂದು ಒದಗಿದರೆ ತಮ್ಮ ಪ್ರಾಣವನ್ನು ಕೆತ್ತು ಅವರನ್ನು ಕಾಪಾಡುವರು. ಈಗ ತೋಟಕ್ಕೆ ವಿಪತ್ತು ಸಂಭವಿಸಿದೆ, ತನ್ನ ಪ್ರಾಣವನ್ನಾದರೂ ಕೆತ್ತು ಈಗ ಕಳ ಸಯ್ಯ ತನ್ನ ಪೂರ್ವೀಕರ, ಆ ತೋಟದ ಮರ್ಯಾದೆಯನ್ನು ಕಾಪಾಡಬೇಕು.

ದಾಂಡಿಗರು, ಪುಂಡರು, ಕಳ್ಳಕಾಕರು, ದರೋಡೆಗಾರರು ಮನೆ ಮಠಗಳನ್ನು ಲೂಟಿಯೆಬ್ಬಿಸಿ, ಹೆಣ್ಣು ಹೊನ್ನನ್ನು ದೋಚಿ, ರಾಜ್ಯ ಕಟ್ಟಿ ದರು, ರಾಜ್ಯಭಾರ ಮಾಡಿದರು. ಚರಿತ್ರೆ ಅವರನ್ನು ರಾಜರೆಂದು ಕರೆ ಯುತ್ತಿವೆ. ಇಂದು ಹಣವಂತರು ಅದೇಕಾರ್ಯವನ್ನು ಸಭ್ಯತೆಯ ಹೆಸರಿ ನಲ್ಲಿಯೂ ಕಾನೂನಿನ ಹೆಸರಿನಲ್ಲಿಯೂ ನಡೆಸಿಕೊಂಡು ಬರುತಿದಾರೆ. ಅವರುಕಾಯಿದೆಗಳನ್ನು ಮಾಡಿ. ಜನರನ್ನು ಕುರಿಗಳಂತೆ. ತರಬುತಿದ್ದಾರೆ. ಕಳಸಯ್ಯ ಬಂದೂಕನ್ನು ತರಲು ಮನೆಕಡೆ ಮುಖಮಾಡಿದ. ಬಂದೂಕಿನ ಹೆಸರನ್ನು ಕೇಳಿದ ತಕ್ಷಣ ಅಡಕೆ ಮರದ ತುದಿಯಲ್ಲಿ ಕುಳಿತುಕೊಂಡು ಜಂಭ ಮಾಡುತ್ತಿದ್ದವನು, ಸರ್ರನೆ ಕೆಳಗಿಳಿದ. ಕೆಳಗೆ ಕೆಲಸ ಮಾಡು

ತಿದ್ದವರಿಗೆ ನಡುಕ ಹುಟ್ಟಿತು. ಅವರೊಲ್ಲೊಬ್ಬ ತಡವರಿಸುತ್ತಾ ಹೇಳಿದ, "ಅಯ್ಯ ಕಳುಹಿಸಿದರು, ನಾವು ಬಂದೆವು. ನೀವು ಬೇಡವೆಂದರೆ ನಾವು ಹೋಗುತ್ತೇವೆ. ನಾವು ನಿಮ್ಮ ಹತ್ತಿರ ವ್ಯಾಜ್ಯಕ್ಕೆ ಬಂದಿಲ್ಲ."

"ವ್ಯಾಜ್ಯಕ್ಕೆ ಬಂದಿಲ್ಲ. ಇನ್ನೇಕೆ ಬಂದಿರುವೆ........ಮಗನೆ ಮಾತನಾಡುತ್ತೀಯಾ" ಎಂದು ಹೇಳುತ್ತಾ ಅವನ ಕೆನ್ನೆಯ ಮೇಲೆ ಫಳೀರ್ ಎಂದು ಹೊಡೆದ. "ಅಯ್ಯೋ! ಸತ್ತೆ!" ಎಂದು ಕೂಗಿಕೊಳ್ಳುತ್ತಾ ಅವನು ಕಾಲು ಕಿತ್ತ. ಇತರರೂ ಓಡಲು ಅನುವಾದರು. ಅವರು ಓಡುತ್ತಿರುವುದನ್ನು ನೋಡಿ, ಬಿದ್ದಿರುವ ಕಲ್ಲೊಂದನ್ನು ಎತ್ತಿ ಕಳಸಯ್ಯ ಅವರ ಮೇಲೆ ಎಸೆದ. ಓಡಿಹೋಗುವ ಅವಸರದಲ್ಲಿ ಒಬ್ಬನು ಕಾಲು ಜಾರಿ ತೋಟದ 'ಕಪ್ಪಿ'ನೊಳಗೆ ಬಿದ್ದ. ಬೀಳುವಾಗ ಮುಖವೆಲ್ಲ ಪರಚಿ, ರಕ್ತದಿಂದ ತುಂಬಿತು.

ಹಂಡೆ ಕಡಾಯಿ, ಕಾಳಿಗೆಯಲ್ಲಿದ್ದ ಲೋಪನ್ನೆಲ್ಲವನ್ನೂ ಚೆಲ್ಲಿ ಅವುಗಳನ್ನೂ ತೆಗೆದುಕೊಂಡು ಹೋಗಿ ಹಳ್ಳ, ಕೆರೆಗಳಿಗೆ ಕಳಸಯ್ಯ ಹಾಕಿ ಬಂದ.

ಪೂರ್ವದೇರ್ಪಾಡಿನ ಪ್ರಕಾರ ಆಳುಗಳು ಪೋಲೀಸ್ ಸ್ಟೇಷನ್ನಿಗೆ ಫಿರಿಯಾದಿ ಕೊಟ್ಟರು. ಪೋಲೀಸು ಇನ್ಸ್ಪೆಕ್ಟರು ತಮ್ಮ ದಲಬಲದೊಂದಿಗೆ ಯುದ್ಧ ಕ್ಷೇತ್ರಕ್ಕೆ ಬಂದು ಮಾಜರಿ ನಡೆಯಿಸಿದರು. ಕಳಸಯ್ಯನ ಮೇಲೆ ಎರಡು ಅಪರಾಧಗಳು ಸ್ಥಿರಪಟ್ಟವು. ಮೊದಲನೆಯದು ಕೋರ್ಟಿನಲ್ಲಿ 'ಡಿಕ್ರಿ' ಯಾದ ಸ್ವತ್ತನ್ನು ಸ್ವಾಧೀನಪಡಿಸಿಕೊಳ್ಳುವಾಗ ಅಡ್ಡಿಪಡಿಸಲು ಬಂದಿದ್ದು ; ಎರಡನೆಯದು ಬಂದೂಕಿನಿಂದ ಹೊಡೆಯುತ್ತೇನೆಂದು ಬೆದರಿಸಿ, ಆಳುಗಳನ್ನು ಕಲ್ಲಿನಿಂದ ಹೊಡೆದು ಗಾಯಪಡಿಸಿದುದು.

ಪೋಲೀಸಿನವರು ಕಳಸಯ್ಯನನ್ನು ಸ್ಟೇಷನ್ನಿಗೆ ಹಿಡಿದುಕೊಂಡು ಹೋದರು.

## ಹನ್ನೆರಡು

ಹಣವಿದ್ದವರ ಕಡೆ ನ್ಯಾಯ ; ಕೊಟ್ಟ ಹಣ ಕೊಡದಿದ್ದ ಕಳಸಯ್ಯನ ಕಡೆ ಯಾರು ?

ಕಳಸಯ್ಯನ ಅಪರಾಧ ಸ್ಥಿರಪಟ್ಟಿದ್ದರಿಂದ ಕೋರ್ಟಿನವರು ಮೂರು ಕಠಿಣ ಸಜವನ್ನು ವಿಧಿಸಿದರು. ತೀರ್ಪನ್ನು ಓದಿದಾಗ ಕಳಸಯ್ಯ ಸುಮ್ಮನೆ ನಿಂತಿದ್ದ. ಜೈಲಿನೊಳಗೆ ಕರೆದುಕೊಂಡು ಹೋಗಿ ಬಟ್ಟೆ ಬದಲಾಯಿಸಿದರು. ಪ್ರಾರಂಭದಲ್ಲಿ ನಿಸ್ಸಾರವಾದ ಜೈಲಿನ ಜೀವನವು ಕಷ್ಟವಾಗಿ ಕಾಣಿಸಿತು. ತರುವಾಯ ಆ ಜೀವನಕ್ಕೆ ಹೊಂದಿಕೊಂಡ.

ಕಳಸಯ್ಯ ತನ್ನ ಜೀವನವನ್ನು ಒಂದು ಶಿಸ್ತಿನಲ್ಲಿಟ್ಟಿರಲಿಲ್ಲ ; ಹುಚ್ಚು ಹೊಳೆಯಂತೆ ಅವನ ಆಚಾರ ವಿಚಾರಗಳಿದ್ದವು. ಜೈಲಿನೊಳಗೆ ಕಾಲಿಟ್ಟ ಮೇಲೆ ಅಲ್ಲಿಯ ನಿಯಮದ ಪ್ರಕಾರ ನಡೆಯಬೇಕಾಯಿತು. ಪ್ರಾರಂಭದಲ್ಲಿ ಅದಕ್ಕೆ ಹೊಂದಿಕೊಳ್ಳುವುದು ಕಷ್ಟವಾಗಿ ಕಾಣಿಸಿದರೂ ಬರಬರುತ್ತಾ ಅದೇ ರೂಢಿಯಾಯಿತು. ಎಲ್ಲರಿಗಿಂತ ಮುಂಚೆ ಎದ್ದು ಸ್ನಾನಮಾಡುವವನು ಕಳಸಯ್ಯ. ಬೂದಿ ಮುಚ್ಚಿದ ಕಿಡಿ ಗಾಳಿಯಿಂದ ಉರಿಯುವಂತೆ ಅವನ ಅಂತರಂಗದಲ್ಲಿ ಹುದುಗಿದ್ದ ಭಕ್ತಿ ಅಪಾರವಾಗಿ ಬೆಳೆಯಿತು. ಸ್ನಾನ ಮಾಡಿಕೊಂಡು ಬಂದವನು ನಿಷ್ಠೆಯಿಂದ ಪ್ರಾರ್ಥನೆ ಮಾಡುತ್ತಿದ್ದ. ಪ್ರತಿ ಭಾನುವಾರವೂ ನಡೆಯುತ್ತಿದ್ದ ಧಾರ್ಮಿಕ ಸಭೆಗೆ ತಪ್ಪದೆ ಹೋಗುತ್ತಿದ್ದ. ಇತರ ಕೈದಿಗಳು ಹೋದರು ಇವನು ಕೊನೆಯವರೆಗಿರುತ್ತಿದ್ದ. ಕೊನೆಗೆ ಧರ್ಮೋಪದೇಶಕರಿಗೆ ಅಡ್ಡಬಿದ್ದು ನಮಸ್ಕಾರ ಮಾಡಿ ಬರುತ್ತಿದ್ದ.

ಜೈಲಿನ ಇತರ ಕೈದಿಗಳಿಗೆ ಕಳಸಯ್ಯನ ನಡತೆ ಸರಿಬೀಳಲಿಲ್ಲ ; ಅವರನ್ನು ಸಂತೋಷಪಡಿಸಲು ಇವನು ಪ್ರಯತ್ನವನ್ನೂ ಪಡುತ್ತಿರಲಿಲ್ಲ. ಅವರ ಮೇಲೆ ಹೆಚ್ಚು ವಿಶ್ವಾಸವಾಗಲಿ, ಅವರೊಂದಿಗೆ ಹೆಚ್ಚು ಮಾತುಕಥೆಯನ್ನಾಗಲಿ ಆಡದೆ ತನ್ನ ನಿತ್ಯಕರ್ಮದಲ್ಲಿ ನಿರತರಾಗಿರುತ್ತಿದ್ದ. ಮನುಷ್ಯರ ಮೇಲೆ ಮೊದಲಿದ್ದ ಮಮತೆ ಇಳಿಮುಖವಾಗಿ ಭಗವಂತನ ಕಡೆ ಬಾಗಿತ್ತು. ತನ್ನ ಸ್ವಂತ ತಂಗಿಯ ಗಂಡನೇ ಜೈಲಿಗೆ ಕಳುಹಿಸಿರುವಾಗ ಪ್ರಪಂಚದಲ್ಲಿ ಯಾರನ್ನು ನಂಬುವುದು ? ಯಾರೊಂದಿಗಾದರೂ ಹೆಚ್ಚು ಮಾತುಕಥೆ

ಯಾಡುತ್ತಿದ್ದರೆ ಅದೇ ಗಾಡವಾಗಿ ಬೇರೆ ಯಾವುದಾದರೊಂದು ವಿಪತ್ತಿಗೆ ಕಾರಣವಾಗಬಹುದೆಂಬ ಭಯದಿಂದ ಎಲ್ಲರಿಂದಲೂ ದೂರ ಸರಿಯುತ್ತಿದ್ದ. ತನ್ನ ಜೀವನದ ಪೂರ್ವಘಟನೆಗಳು ಕಾವ್ಯದಂತೆ ಪ್ರಿಯವಾಗಿದ್ದವು. ಏಕಾಂತ ದಲ್ಲಿರುವಾಗ ಆ ಘಟನೆಗಳನ್ನೆ ಜ್ಞಾಪಿಸಿಕೊಳ್ಳುತ್ತಿದ್ದ :

ತಂಗಿಯ ಮದುವೆಗೆ ಪ್ರಯತ್ನ, ಆಕೆಯ ಮದುವೆ. ಆಕೆಯನ್ನು ಕರೆದು ಕಳುಹಿಸುವುದು, ಕೆಲವು ಸಾರಿ ಆಕೆಯನ್ನು ಕರೆದುಕೊಂಡು ಬರಲು ತಾನು ಹೋಗಿರುವುದು, ಮೈಸೂರಿಗೆ ದಸರ ಪ್ರಯಾಣ, ಚಂದ್ರಯ್ಯ ನೊಡನೆ ಜಗಳ, ಹಿಂದಕ್ಕೆ ಊರಿಗೆ ಪ್ರಯಾಣ, ವ್ಯಾಪಾರ, ತರುವಾಯ ಅದರ ಪರಿಣಾಮ ಇದೆಲ್ಲ ಒಂದೊಂದಾಗಿ ಬಂದು ಮಾಯವಾಗುತ್ತಿದ್ದವು. ಅನೇಕ ಸಾರಿ ಚಂದ್ರಯ್ಯನನ್ನು ನೆನಸಿಕೊಂಡು, ಮನಸ್ಸಿನಲ್ಲಿ ಅಂದುಕೊಳ್ಳ ತ್ತಿದ್ದ—ನಾವು ಮೊದಲು ಕಾದಾಡಿದರೂ ಕೊನೆಗೆ ಹೇಗೆ ಹೊಂದಿಕೊಂಡು ಮಿತ್ರರಾದೆವು. ಪ್ರಪಂಚ ಹಾಗೂ ಇದೆ. ಹೀಗೂ ಇದೆ.

ಜೈಲಿನ ಅಧಿಕಾರಿಗಳಿಗೆ ಕಳಸಯ್ಯನ ಮಾತಿನ ಮೇಲೆ ನಂಬಿಕೆ. ಅವನು ಏನಾದರೂ ಹೇಳಿದರೆ ತಳ್ಳಿ ಹಾಕದೆ ಯೋಚಿಸುವುದಾಗಿ ಹೇಳು ತ್ತಿದ್ದರು. ಇದೇ ರೀತಿ ಕಳಸಯ್ಯನ ಜೈಲಿನ ಜೀವನ ದಿನವಾಗಿ ತಿಂಗ ಳಾಗಿ ವರ್ಷವಾಗಿ ಕಳೆಯುತ್ತಿತ್ತು.

## ಹದಿಮೂರು

ದುಗ್ಗಮ್ಮ ಕೇಳಿದಳು," ಇಂದಿಗೆ ಮೂರು ದಿನವಾಯಿತೆ ?"

ಪ್ರಶಾಂತವಾದ ಮಧುರ ಧ್ವನಿಯನ್ನು ಕೇಳಿ ಅಂಗಿಯನ್ನು ತೆಗೆಯು ತ್ತಿದ ಸೋಮಯ್ಯ, ತೆಗೆಯುವುದನ್ನು ಬಿಟ್ಟು ಆ ಕಡೆ ನೋಡಿದ. ದುಗ್ಗಮ್ಮ ನಿಂತಿದ್ದಳು. ಆಕೆಯ ಮುಖದ ಮೇಲೆ ನಗುವಿನ ಕಾಂತಿಯಾಗಲಿ, ವಿಷಾ ದದ ರೇಖೆಯಾಗಲಿ ಇರಲಿಲ್ಲ. ವಿದೇಶಕ್ಕೆ ಹೋಗಿದ್ದ ಮಗನ ಚಿಂತೆಯಲ್ಲಿದ್ದ ತಾಯಿಯಂತಿದ್ದಳು.

ಕಳಸಯ್ಯನನ್ನು ಜೈಲಿಗೆ ಕಳುಹಿಸಿ, ರೋಧನವನ್ನು ಕೇಳುವ ಕಲ್ಪನೆಯಿಂದ ಮೆಟ್ಟಲನ್ನು ಹತ್ತಿ ಜಗಲಿಗೆ ಬಂದ ಸೋಮಯ್ಯ. ಮನೆ

ತಣ್ಣಗಿರುವುದನ್ನು ನೋಡಿ ಸಮಾಧಾನಪಟ್ಟು ಬಟ್ಟಿತೆಗೆಯುತ್ತಿದ್ದ. ಇದ್ದಕ್ಕಿದಂತೆ ಹೆಂಡತಿಯು ಪ್ರಶ್ನೆಯನ್ನು ಕೇಳಿ ಉತ್ತರ ಕೊಡಲಾರದೆ ತಲೆ ತಗ್ಗಿಸಿಕೊಂಡನು.

ಅನ್ನಹಾರಗಳನ್ನು ಬಿಟ್ಟು ಹೆಂಡತಿ ರೋಧಿಸುತಿರಬಹುದೆಂದು ಸೋಮಯ್ಯ ನೆನಸಿದ್ದ. ಮನೆಯಲ್ಲಿ ಅಳುವ ಶಬ್ದ ಕೇಳದಿದ್ದರಿಂದ ಸಮಾಧಾನವಾಗಿತ್ತು, ದುಗ್ಗಮ್ಮ ಕೇಳಿದ ಪ್ರಶ್ನೆ ಅವನನ್ನು ನೆಲಸಮ ಮಾಡಿತು. ಉತ್ತರವನ್ನು ಹುಡುಕುವವನಂತೆ ನೆಲ ನೋಡಹತ್ತಿದ. ದುಗ್ಗಮನೇ ಮಾತು ಮುಂದುವರಿಸಿದಳು," ಅಣ್ಣಯ್ಯ ಜೈಲಿಗೆ ಹೋಗಿದ್ದು ಮೊನ್ನೆಯೆಂದು ಹೇಳಿದರು. ಅದು ಸರಿಯೇ ?"

ಸೋಮಯ್ಯ ಮುಖವೆತ್ತಿ ದುಗ್ಗಮ್ಮನ ಕಡೆ ನೋಡಿದ.

ಹೂವು, ಗಂಧ, ಕರ್ಪೂರ, ಮಸಿಪಾತ್ರೆ ಇವುಗಳಿಂದ ತುಂಬಿದ ಹರಿವಾಣ ಎಡಗೈಯಲಿದೆ, ಬಲಗೈಯ್ಯ ಬೆರಳೊಂದು ಮಸಿಪಾತ್ರೆಯೊಳಗಿದೆ. ತನ್ನ ಮುಖಕ್ಕೆ ಮಸಿಬಳಿಯಲು ಬಂದವಳಂತೆ ತೋರಿದಳು. ಮಾನಾಪಮಾನವನ್ನೂ ವಿಪತ್ತನ್ನೂ ನುಂಗಿ ಕೈವಲ್ಯವನ್ನು ಕೋರುವ ನಮ್ಮ ತಾಯಂದರಿಗೆ ಈ ಭಾವನೆ ಎಂದಾದರೂ ಬರುವುದೆ ? ದುಗ್ಗಮ್ಮನು ಅನ್ನಹಾರಗಳನ್ನು ಬಿಟ್ಟು ಅಳುತ್ತಾ ಮಲಗಿದ್ದರೆ ಸೋಮಯ್ಯನಿಗೆ ಇಷ್ಟು ಕ್ಲೇಶವಾಗುತ್ತಿರಲಿಲ್ಲ. ಆಕೆಯ ಪ್ರತಿಯೊಂದು ಆಚರಣೆಯೂ ಇವನಿಗೆ ಗ್ಲಾನಿಯನ್ನುಂಟುಮಾಡುತಿತ್ತು.

" ಹೌದು ಮೊನ್ನೆ " ಎಂದು ಕಿರುದನಿಯಲ್ಲಿ ನೆಲ ನೋಡುತ್ತಾ ಸೋಮಯ್ಯ ಹೇಳಿದ.

ಆ ಹರಿವಾಣದೊಂದಿಗೆ ದುಗ್ಗಮ್ಮ ದೇವರ ಮನೆಗೆ ಹೋದಳು. ರಾಮದೇವರ ಪಟದ ಹತ್ತಿರ ಎರಡು ಮಸಿಯಗುರ್ತಿನ ಪಕ್ಕದಲ್ಲಿ ಇನ್ನೊಂದು ಮಸಿಯ ಗುರುತನ್ನು ಹಾಕಿ ಪೂಜೆ ನೆರವೇರಿಸಿದಳು. ಒಪ್ಪತ್ತು ಊಟಮಾಡಿ ಅಧಿಕ ಸಮಯ ಪೂಜಾಪಾಠಗಳಲ್ಲಿ ನಿರತಳಾಗಿರುತಿದ್ದಳು. ತನ್ನ ಈ ಸಾಧನ ಜೀವನದೊಂದಿಗೆ ಪತಿಯಸೇವೆಯನ್ನು ನಿರಾಂತಕವಾಗಿ ನಡೆಸಿಕೊಂಡು ಬಂದಳು. ಆಕೆಯಿಲ್ಲಿರುವ ಸಲಿಗೆ ಕಡಮೆಯಾಗಿ ಕ್ರಮೇಣ ಗೌರವ ಬುದ್ಧಿ ಸೋಮಯ್ಯನಲ್ಲಿ ಮೊಳೆಯುತ್ತಾ

ಬ್ಬಿತ್ತು. ಆಕೆಯ ಮಾತನ್ನು ನಕ್ಕು ತಳ್ಳುವ ಸಾಹಸವು ಮಾಯವಾಗಿತ್ತು. ದೇವರಮನೆಯಲ್ಲಿ ಪೂಜೆಗೆ ಕುಳಿತ್ತಿದ್ದರೂ ಮನೆಯ ಸರ್ವಾಧಿಕಾರವನ್ನು ಆಕೆಯೇ ನಡಸುತಿರುವಂತೆ ಕಾಣುತಿತ್ತು. ಹಾಕಿರುವ ಮಸಿಯ ಬೊಟ್ಟು ಗಳನ್ನೆಲ್ಲ ಪ್ರತಿದಿನವೂ ದುಗ್ಗಮ್ಮ ಒಂದು ಸಾರಿ ಲೆಕ್ಕಮಾಡಿ ಮುಂದೊಂದು ಬೊಟ್ಟನ್ನಿಟ್ಟು ಪೂಜೆಗೆ ಕುಳಿತು ಕೊಳ್ಳುತ್ತಿದ್ದಳು.

ದುಗ್ಗಮ್ಮನ ವೈರಾಗ್ಯ ಪೂರ್ಣವಾದ ಜೀವನದ ಕಥೆಯನ್ನು ಕೇಳಿ, ನೊಂದು, ಮಾತನಾಡಿಸಿಕೊಂಡು ಹೋಗಲು ಅತ್ತಿಮನೆ ಸುಬಮ್ಮನವರೊಂದು ಸಾರಿ ತಲಮಕ್ಕಿಗೆ ಬಂದರು. ದುಗ್ಗಮ್ಮನನ್ನು ನೋಡಿದ ಮೇಲೆ ಜನರ ಮಾತು ನಿಜವೆಂದು ಸುಬ್ಬಮ್ಮ ಅಂದುಕೊಂಡರು. ಬಾಡಿದಮುಖ; ಕೃಶವಾದ ಶರೀರ. ಮೊದಲು ನೋಡಿದವರಿಗೆ ಗುರುತುಸಿಗದಷ್ಟು ದುಗ್ಗಮ್ಮ ಇಳಿದು ಹೋಗಿದ್ದಳು. ಸಮಾಧಾನಪಡಿಸುವ ನುಡಿಯಲ್ಲಿ ಸುಬ್ಬಮ್ಮ ಹೇಳಿದರು, " ನಡೆಯಬಾರದ ಕೆಲಸ ನಡೆದು ಹೋಯಿತು. ಕಳಸಯ್ಯ ಹಿಂತಿರುಗಿ ಬರುತ್ತಾನೆ ನೀನು ಸುಮ್ಮನೆ ಏಕೆ ಅದನ್ನೇ ಮನಸ್ಸಿಗೆ ಹಚ್ಚಿಕೊಂಡು ಸೊರಗುತ್ತಿರುವೆ"

" ಅಣ್ಣಯ್ಯ ಹಿಂತಿರುಗಿ ಬರುವನೆ! ಆ ಅಣ್ಣಯ್ಯನನ್ನು ನಾನು ಕಳೆದುಕೊಂಡೆ. ಅವನಿದ್ದಿದ್ದರೆ ನಾನು ಹಿಗಿರುತಿದ್ದೆನೆ? ನಾವು ಕೆಳಮನೆಯ ಮನೆತನದವರು. ಗಂಡಸಾಗಲಿ, ಹೆಂಗಸಾಗಲಿ ಅವರಿಗೆ ಬೇಗ ಸಾವು ಬರುವುದಿಲ್ಲ. ಇಲ್ಲದಿದ್ದರೆ ನಾನು ಇದುವರೆಗೂ ಬದುಕಿರಬೇಕೇ"

" ಎಂಥಾ ಮಾತನಾಡುತಿರುವೆ ನೀನು ದುಗ್ಗೂ! ನನ್ನ ಕಣ್ಣು ಮುಂದೆ ಲಂಗ ಹಾಕಿಕೊಂಡು ತಿರುಗುತ್ತಿದ್ದೆ. ನನ್ನ ಕಣ್ಣುಮುಂದೆ ಹೋಗಬೇಕೆನ್ನುವಿಯಲ್ಲ. ನಮ್ಮನ್ನೆಲ್ಲ ಮೊದಲು ಕಳಹಿಸಿಕೊಡಿ. ನೀನು ಇನ್ನು ಬದುಕಿ, ಬಾಳಿ, ನಾಲ್ಕುಜನರಿಗೆ ಉಪಕಾರವಾಗುವವಳು ಹೀಗೆ ಅಂದರೆ ಗತಿಯೆನು?'

"ಪ್ರಪಂಚದಲ್ಲಿ ಚೆನ್ನಾಗಿದ್ದರೆ ಬದುಕಬೇಕು. ಇಲ್ಲದಿದ್ದರೆ ಸಾಯಬೇಕು"

"ಸಾವು ಬಾ ಎಂದರೆ ಬರುವುದಿಲ್ಲ, ಹೋಗು ಎಂದರೆ ಹೋಗುವುದಿಲ್ಲ. ಸಮಯ ಬಂದಾಗ ಹಿಡಿದು ನಿಲ್ಲಿಸಿದರೂ ನಿಲ್ಲುವುದಿಲ್ಲ."

## ಹದಿನಾಲ್ಕು

ದುಗ್ಗಮ್ಮನ ಆಚರಣೆಯಲ್ಲಿ ವ್ಯತ್ಯಾಸವುಂಟಾಗಲಿಲ್ಲ.

ದುಗ್ಗಮ್ಮ ಕಾಹಿಲೆ ಬೀಳುವಳೆಂದು ಎಲ್ಲಾ ನೆನಸಿದ್ದರು. ದುಗ್ಗಮ್ಮ ಹೇಳಿದ ಹಾಗೆ ತಲೆನೋವು ಕೂಡ ಆಕೆಯ ಹತ್ತಿರ ಸುಳಿಯಲಿಲ್ಲ. ಆಕೆಯ ಗಂಡ ಮಳೆ ಹತ್ತುವ ಸಮಯ ಕಾಹಿಲೆ ಬಿದ್ದ. ಮೊದಲಿನಿಂದಲೂ ಸೋಮಯ್ಯನದು ಕಾಹಿಲೆ ಶರೀರ, ಅದರೊಂದಿಗೆ ಮನೋವ್ಯಥೆ.

ಬಲಿಷ್ಠ ಶರೀರದವರೇ ಮುಂಗಾರಿನಲ್ಲಿ ಹಾಸಿಗೆ ಹಿಡಿಯುವಾಗ ರೋಗ ಶರೀರದ ಸೋಮಯ್ಯ ಕಾಹಿಲೆ ಬೀಳುವುದು ಹೆಚ್ಚಲ್ಲ.

ಸೋಮಯ್ಯ ಹಾಸಿಗೆ ಹಿಡಿದಿದ್ದರಿಂದ ದುಗ್ಗಮ್ಮನಿಗೆ ದುಃಖದ ಜೊತೆಗೆ ಮತ್ತಷ್ಟು ದುಃಖ ಬಂದು ಸೇರಿತು. ಗಂಡನ ಸೇವೆಯಲ್ಲಿ ಎಲ್ಲಿಯಾದರೂ ವಂಚನೆ ಮಾಡಿದೆನೇ ಎಂಬ ಸಂಶಯ ಆಕೆಯ ಕರುಳನ್ನು ಕಿತ್ತು ತಿನ್ನುತಿತ್ತು. ಆಕೆಯ ಉದ್ವೇಗ, ಪರಿತಾಪಗಳನ್ನು ನೋಡಿ ಹಾಸಿಗೆಯ ಮೇಲೆ ನರಳುತ್ತಾ ಮಲಗಿದ್ದ ಸೋಮಯ್ಯ ಹೇಳಿದ, "ಪೂಜಾಪಾಠವನ್ನು ಸಾಂಗವಾಗಿ ನೆರವೇರಿಸಿಕೊಂಡು ಬಾ. ಈ ಜನ್ಮದಲ್ಲಿ ನಿನ್ನನ್ನು ಸುಖದಲ್ಲಿಡದೆ ಹೋದೆ, ಮುಂದಿನ ಜನ್ಮದಲ್ಲಾದರೂ ದೇವರು ಒಳ್ಳೆಯದನ್ನು ಮಾಡಲಿ. ಬಡಿಸಿದವರ ಕೈಯನ್ನೆ ಕಚ್ಚಿದ ಪಾಪಿ ನಾನು. ಇನ್ನೆಷ್ಟು ಮಂದಿಯನ್ನು ಸೆರೆಮನೆಗೆ ಕಳುಹಿಸಲು ನಾನು ಬದುಕಿರಬೇಕೋ! ನನ್ನ ಚಿಂತೆಯನ್ನು ಬಿಟ್ಟು ಬಿಡು.''

"ಚಿಂತೆ ಬಿಟ್ಟುಬಿಡೆಂದು ಹೇಳಬಹುದು ಅದು ನಮಗೆ ಸಾಧ್ಯವಾಗಬೇಕಲ್ಲ. ಆ ಚಿಂತೆಯೇ ನಮ್ಮನ್ನು ಬದುಕಿಸಿರುವುದು. ಶರೀರವನ್ನೇ ಚಿಂತೆ ಭಸ್ಮಮಾಡುವುದೆಂದೂ ಹಿರಿಯರು ಹೇಳುವುದುಂಟು. ಚಿಂತೆ, ಚಿತೆಯೆನ್ನುವುದು ಸಹಜ, ಅದು ಶರೀರವನ್ನು ಭಸ್ಮಮಾಡುವುದು, ಶರೀರದಲ್ಲಿರುವ ಕಲ್ಮಷವನ್ನು ಭಸ್ಮಮಾಡಿ ಶರೀರವನ್ನು ಪವಿತ್ರಗೊಳಿಸುವುದು. ಚಿಂತೆಯೇ ಮನುಷತ್ವ; ಚಿಂತೆಯಿಲ್ಲದವನು ಪಶು. ಯಾವುದನ್ನು ಭಕ್ತಿ ಎನ್ನುವರೋ, ಯಾವುದನ್ನು ರಸ ಎನ್ನುವರೋ ಯಾವುದನ್ನೂ ಆನಂದ ಎನ್ನುವರೋ ಅದೇ ನಮ್ಮ ಭಾಗ್ಯಕ್ಕೆ ಚಿಂತೆ. ಆದರಿಂದಲೇ ಹೆಂಗಸರು ಬದುಕಿರುವುದು."

ನಾನು ಸೋತವನು, ನೀನು ಗೆದ್ದವಳು ; ನಾನು ಮಲಗಿರುವೆನು, ನೀನು ನಿಂತಿರುವೆ. ನನ್ನ ಹೃದಯ ವಿಷದಿಂದ ತುಂಬಿದೆ, ನಿನ್ನದು ರಸದಿಂದ ಪ್ರಕಾಶಿಸುತ್ತಿದೆ. ನಾನು ಶೇಖರಿಸಿ ಕಳಕೊಂಡೆ. ನೀನು ಕೊಟ್ಟು ಶೇಖರಿಸಿದೆ. ಇದೇ ನಮ್ಮಿಬ್ಬರಿಗೂ ಇರುವ ವ್ಯತ್ಯಾಸ.''

ನೀವು ಕಲಿತವರು, ನಾನು ಮೌಢ್ಯೆ. ನಿಮ್ಮೊಂದಿಗೆ ಮಾತಿನಲ್ಲಿ ಪಾರಾಗಲು ಸಾಧ್ಯವೇ? ನಾವು ಯಾವಾಗಲೂ ಗಂಡಸರನ್ನು ಅಧೋಗತಿಗೆ ತೆಗೆದುಕೊಂಡು ಹೋಗುವೆವು. ನಿಮ್ಮನ್ನು ಸರಿಯಾಗಿ ನೋಡಿಕೊಳ್ಳದಿದ್ದುದರಿಂದ ಕಾಯಿಲೆ ಬಿದ್ದಿರಿ."

" ಅಂಥಾ ಮಾತನ್ನು ತಿರುಗಿ ಬಾಯಲ್ಲಿ ತರಬೇಡ ಹುಚ್ಚಿ! ಇದು ದೇವರು ಕೊಟ್ಟ ಶಿಕ್ಷೆ. ನಾನು ಭಾವನನ್ನು ಜೈಲಿಗೆ ಕಳುಹಿಸಲಿಲ್ಲವೆ? ಈ ರೂಪದಲ್ಲಾದರೂ ಪ್ರಾಯಶ್ಚಿತ್ತವನ್ನು ಭೋಗಿಸುತ್ತೇನೆ"

" ನೀವು ಇದನ್ನೆಲ್ಲ ಮನಸ್ಸಿಗೆ ಹಚ್ಚಿಕೊಳ್ಳಬೇಡಿ, ಅಣ್ಣಯ್ಯ ಸದ್ಯ ಬರುತ್ತಾನೆ'' ಎಂದು ಹೇಳುತ್ತಾ ದುಗ್ಗಮ್ಮ ಒಳಗೆ ಹೋದಳು.

ಸ್ವಲ್ಪ ಹೊತ್ತಿನ ನಂತರ ಗಂಡನ ಹತ್ತಿರ ಬಂದು ಹೇಳಿದಳು, " ಮೂರು ವರ್ಷಕ್ಕೆ ಇನ್ನು ಐದು ತಿಂಗಳು ಮೂರುದಿನ ಬಾಕಿ ಇದೆ. ಐದು ತಿಂಗಳು ಮೂರುದಿನಕ್ಕೆ ಅಣ್ಣಯ್ಯ ಬರುತ್ತಾನೆ.''

" ಅದುವರೆಗೂ ಬದುಕಿದ್ದರೆ ಅವರ ಮುಖ ನೋಡಿ ಸಾಯುತ್ತೇನೆ; ಅದಕ್ಕಿಂತ ಮುಂಚೆ ಸತ್ತರೆ ನನ್ನ ಅಪರಾಧವನ್ನು ಕ್ಷಮಿಸುವಂತೆ ನನ್ನ ಪರವಾಗಿ ನೀನು ಹೇಳು.''

" ಇದೇ ಸರಿಯಿಲ್ಲದ ಮಾತು ; ಸುಮ್ಮನೆ ಮಲಗಿ ಕೊಳ್ಳಿ. ಹೆಚ್ಚು ಮಾತನಾಡುವುದರಿಂದ ಜ್ವರವು ಏರುವುದು" ಎಂದು ಹೇಳಿ ಅಲ್ಲಿದ್ದರೆ ತಿರುಗಿ ಮಾತಿಗೆ ಅವಕಾಶವಾಗುವುದೆಂದು ಹೊರಟು ಹೋದಳು.

ಒಂದು ರೀತಿಯಲ್ಲಿ ಪ್ರಪಂಚಕ್ಕೆ ಕಳಸಯ್ಯ ಸತ್ತಹಾಗಿದ್ದರೂ ತಲಮಕ್ಕಿಯಲ್ಲಿ ಜೀವಿಸಿದ್ದ. ಸೋಮಯ್ಯ ಹಾಸಿಗೆ ಹಿಡಿದಿದ್ದು ಹಳೆಯ ಗಾಯ ತಿರುಗಿ ಹುಣ್ಣಾದ ಹಾಗಾಯಿತು. ಹಿಂದೆ ಎರಡು ಸಾರಿ ರಾತ್ರಿ ಹಗಲು ಒಂದು ಮಾಡಿ ಸೋಮಯ್ಯನನ್ನು ಮೃತ್ಯುವಿನ ಬಾಯಿಯಿಂದ ಕಳಸಯ್ಯ ಬಿಡಿಸಿದ್ದ.

ಅಣ್ಣಯ್ಯ, ನೀನು ಸ್ವಲ್ಪ ಹೊತ್ತು ಮಲಗಿಕೊ ನಾನು ಕಾಹಿಲೆ ಯವರ ಹತ್ತಿರ ಕುಳಿತಿರುತ್ತೇನೆ ಎಂದು ತಂಗಿ ಹೇಳಿ ಬಲತ್ಕಾರದಿಂದ ಅಣ್ಣನನ್ನು ಮಲಗಿಸಿ ತಾನು ರೋಗಿಯ ಬಳಿ ಕುಳಿತು ಕೊಳ್ಳುತ್ತಿದ್ದಳು. ಆದರೆ ದುಗ್ಗಮ್ಮನಿಗೆ ತೂಕಡಿಕೆ ಬರುತಿತ್ತು ; ಕಳಸಯ್ಯ ಕಣ್ಣು ತೆರೆದು ಕೊಂಡು ಮಲಗಿರುತ್ತಿದ್ದ.

ಶ್ರೀಮಂತರು ಕಾಹಿಲೆಬಿದ್ದರೆ ಡಾಕ್ಟರ ಹಿಂಡು ನೆರೆದಿರುತ್ತದೆ, ಸಂಬಂಧಿಗಳ ಸುಳುವಿರುವುದಿಲ್ಲ. ಬಡವರು ಕಾಹಿಲೆ ಬಿದ್ದರೆ ಸಂಬಂಧಿ ಗಳು ನೆರೆದಿರುತ್ತಾರೆ, ಡಾಕ್ಟರ ಪತ್ತೇ ಇರುವುದಿಲ್ಲ.

ಸೋಮಯ್ಯನ ಚಿಕಿತ್ಸೆಗೆ ಅನೇಕ ಕಡೆಗಳಿಂದ ಡಾಕ್ಟರು ಬಂದಿದ್ದರು. ಸೋಮಯ್ಯನಿಗೆ ಇವರೊಬ್ಬರ ಗೊಡವೆಯು ಬೇಕಿರಲಿಲ್ಲ. ಅವನ ಕಣ್ಣು ಬಾಗಿಲನ್ನು ಕಾದಿರುತಿತ್ತು. ಯಾರಾದರು ಆಪ್ತರು ಬಂದು ಎರಡು ಮಾತನಾಡಲಿ ಎಂಬುವ ಮನಸ್ಸು ಸೋಮಯ್ಯನಿಗೆ. ಡಾಕ್ಟರು ಮದ್ದು ಕೊಡುತ್ತಾ ಬಂದರು. ಕಾಹಿಲೆ ಹೆಚ್ಚುತ್ತಾ ಬಂತು. ದುಗ್ಗಮ್ಮ ವಿಶ್ವಪ್ರಯತ್ನದಿಂದ ಪಥ್ಯಪಾನವನ್ನು ಜಾಗರೂಕತೆಯಿಂದ ನೋಡಿ ಕೊಂಡು ಬಂದಳು. ಆದರೂ ತನಗೆ ತೃಪ್ತಿಯಾಗುತಿರಲಿಲ್ಲ.

ಸೋಮಯ್ಯನಿಗೆ ಜ್ವರ ಏರುತಿದೆ. ದುಗ್ಗಮ್ಮ ಮಂಡಿಯಮೇಲೆ ತಲೆಯೂರಿಕೊಂಡು ಕಣ್ಣೀರು ಕರೆಯುತಿದಾಳೆ. ಇಂಥಾ ವಿಪತ್ತಿನ ಸಮಯದಲ್ಲಿ ಅಂಚೆ ಜವಾನನು ಕಾಗದವೊಂದನ್ನು ತಂದು ಕೊಟ್ಟನು. ಅದರಲ್ಲಿ ಹೀಗಿತ್ತು :

ಚಂದ್ರಯ್ಯ ತೀರಿಹೋಗುವ ಮುಂಚೆ ಮರಣ ಶಾಸನವನ್ನು ಬರೆ ದಿರುವರು. ಅದರಲ್ಲಿ ತನ್ನ ಧರ್ಮ ತಂಗಿ ದುಗ್ಗಮ್ಮನ ಹೆಸರಿನಲ್ಲಿ ಹತ್ತು ಸಾವಿರ ರೂಪಾಯಿಯನ್ನು ಬಿಟ್ಟಿರುವರು.

ವಿಪತ್ತು ಯಾವಾಗಲೂ ಒಂಟಿಯಾಗಿರುವುದಿಲ್ಲ. ಗಂಡ ನರಳುತ್ತಾ ಹಾಸಿಗೆ ಹಿಡಿದಿರುವನು, ಅಣ್ಣ ಸೆರೆಮನೆಯಲ್ಲಿ ಸೊರಗುತಿರುವನು. ವಿಧಿ ಇಷ್ಟರಿಂದ ತೃಪ್ತನಾಗಲಿಲ್ಲ ; ಧರ್ಮ ಸಹೋದರನ ಮರಣವಾರ್ತೆಯನ್ನು ತಂದಿತು. ದುಗ್ಗಮ್ಮ ಕಲ್ಲಾಗಿ ಎಲ್ಲವನ್ನೂ ಸಹಿಸಿದಳು.

ತನ್ನ ಊರಿಗೆ ಬರುವಂತೆ ಮೂರು ಮಂದಿಯನ್ನೂ ಚಂದ್ರಯ್ಯ

ಕರೆದಿದ್ದ, ತಾನೂ ಬರುವುದಾಗಿ ಹೇಳಿದ್ದ. ಇವರೂ ಹೋಗಿರಲಿಲ್ಲ, ಅವನೂ ಬರಲಿಲ್ಲ. ಒಬ್ಬೊಂಟಿಗನ ಸಂಸಾರ; ಹೋಗಬೇಕೆಂಬ ಯೋಚನೆಯಲ್ಲಿಯೇ ಚಂದ್ರಯ್ಯ ಕಾಹಿಲೆ ಬಿದ್ದ. ಸಾಯುವ ಮೊದಲು ತನ್ನ ಆಸ್ತಿಯನ್ನೆಲ್ಲ ಮರಣ ಶಾಸನದ ಮೂಲಕ ವಿಲೇವಾರಿ ಮಾಡಿದ್ದ.

ಒಬ್ಬ ಅಣ್ಣನಿಗೆ ಏನು ಮಾಡಲೂ ಸಾಧ್ಯವಾಗದಿದ್ದುದರಿಂದ ಇರುವ ಮತ್ತೊಬ್ಬ ಅಣ್ಣನಿಗಾದರೂ ನೆರವಾಗಬೇಕೆಂಬ ಸಂಕಲ್ಪದಿಂದ ದುಗ್ಗಮ್ಮ ಒಂದರ ದುಃಖವನ್ನು ಇನ್ನೊಂದರ ಪ್ರಯತ್ನದಲ್ಲಿ ಕಳೆಯಲು ಯತ್ನಿಸಿದಳು. ಕೋರ್ಟಿನಲ್ಲಿ ಹದಿನೈದು ಸಾವಿರ ರೂಪಾಯಿಗೆ ಕಳಸಯ್ಯನ ಮೇಲೆ "ಡಿಕ್ರಿ' ಯಾಗಿತ್ತು. ಮರಣ ಶಾಸನದ ಮೂಲಕ ಚಂದ್ರಯ್ಯನಿಂದ ಹತ್ತುಸಾವಿರ ರೂಪಾಯಿ ಬಂದಿತ್ತು. ಉಳಿದ ಐದು ಸಾವಿರ ರೂಪಾಯಿ ಸೇರಿಸುವ ಯೋಚನೆ ಹುಟ್ಟಿತು. ಹತ್ತಿಪ್ಪತ್ತು ಸಾವಿರ ರೂಪಾಯಿಗಳಿರುವ ಕಬ್ಬಿಣದ ಪೆಟ್ಟಿಗೆಯ ಬೀಗದ ಕೈ ದುಗ್ಗಮ್ಮನ ಕೈಯ್ಯಲ್ಲಿದೆ, ಪಶ್ಚಾತ್ತಾಪದ ಹಾಸಿಗೆಯ ಮೇಲೆ ಗಂಡ ಮಲಗಿ ಹೊರಳಾಡುತ್ತಿತ್ತಿದ್ದಾನೆ. ದುಗ್ಗಮ್ಮನ ಬಾಯಿಯಲ್ಲಿ ಒಂದು ಮಾತು ಬಂದರೆ ಸಾಕು ಕೋರ್ಟಿನ ಎಲ್ಲಾ ಹಣವನ್ನು ಈ ಕಬ್ಬಿಣದ ಪೆಟ್ಟಿಗೆಯಿಂದಲೇ ತೆಗೆದು ಕಟ್ಟಲು ಸೋಮಯ್ಯ ಅನುಮತಿಕೊಡುವನು. ಅದು ಅಣ್ಣನನ್ನು ಜೈಲಿಗೆ ಕಳುಹಿಸಿದ ಹಣ. ಅದನ್ನು ಯೋಚಿಸುವುದು ಸಹ ಪಾಪಕರ. ತಿರುಗಿ ಅಣ್ಣ ಜೈಲಿಂದ ಹೊರಗೆ ಬರುವ ಮೊದಲು ಅವನ ಆಸ್ತಿ ಅವನಿಗಾಗುವಂತೆ ಮಾಡುವ ಮಾರ್ಗ ಯಾವುದು ?

ಪತಿಯು ಮರಣೋನ್ಮುಖನಾಗಿದ್ದರೂ ಆತನ ಹಾಸಿಗೆಯ ಬಳಿ ಕುಳಿತುಕೊಂಡು ದುಗ್ಗಮ್ಮ ಅವನ ಸೇವೆಯನ್ನೂ ಮಾಡುತ್ತ ಅಣ್ಣನ ಆಸ್ತಿಯನ್ನು ಬಿಡಿಸುವ ಮಾರ್ಗವನ್ನು ಯೋಚಿಸುತ್ತಿದ್ದಳು.

ತೌರುಮನೆಯವರು ಕೊಟ್ಟಿದ್ದ, ಮದುವೆಯಲ್ಲಿ ಬಂಧುಬಳಗದವರು ಓದಿಸಿರುವ ಚಿನ್ನ ಬೆಳ್ಳಿಯ ಆಭರಣಗಳು ದುಗ್ಗಮ್ಮನ ಹತ್ತಿರವಿದ್ದವು. ಆಭರಣವೆಂದರೆ ಆಕೆಗೆ ತುಂಬಾ ಪ್ರೇಮ. ಅವುಗಳನ್ನು ತೊಟ್ಟುಕೊಳ್ಳುವುದೆಂದರೆ ಆಕೆಗೆ ದೊಡ್ಡ ಹಬ್ಬ. ಈಗ ಅವುಗಳನ್ನು ಮಾರಿ ಹಣವನ್ನು

ಭರ್ತಿಮಾಡಲು ನಿರ್ಧರಿಸಿದಳು. ಈಗಲೂ ಆಕೆಗೆ ಅದೇ ತರದ ಆನಂದ. ಆದರೆ ಅದು ಶಾರೀರಕವಾದ್ದು ; ಇದು ಆತ್ಮಾನಂದ.

ಸಮುದ್ರದ ನೀರು ಸಮುದ್ರವನ್ನು ಸೇರುವಂತೆ ದುಗ್ಗಮ್ಮ ಕಟ್ಟಿದ ದುಡ್ಡು ದುಗ್ಗಮನ ಮನೆಗೆ ಬಂತು. ಜಮೀನು ಕೆಳಮನೆಯವರ ಹೆಸರಿಗಾಯ್ತು. ಹುಟ್ಟಿ ಬೆಳೆದ ಮನೆತನಕ್ಕೆ ಕೈಲಾದ ಮಟ್ಟಿಗೆ ನೆರವಾದೆನಲ್ಲ ಎಂದು ಆಕೆಗೆ ಸಮಾಧಾನ ಆಕೆಯ ಮನಸ್ಸಿನಲ್ಲಿ, ಗಂಡನ ಕಾಯಿಲೆ ಅಣ್ಣನ ಬಿಡುಗಡೆಗಳೆರಡೂ ಛಾಯಾ ಪ್ರಕಾಶಗಳಂತಿದ್ದವು. ಅಣ್ಣಯ್ಯ ಬರುವ ವರೆಗೆ ಹಾಗೂ ಹೀಗೂ ದೇವರು ಕಾಪಾಡಿದರೆ ಅಣ್ಣಯ್ಯ ಬಂದ ಕೂಡಲೇ ಕಾಹಿಲೆಯವರನ್ನು ಅವನಿಗೊಪ್ಪಿಸುವೆನೆಂದು ಅವನು ಬರುವ ನಿರೀಕ್ಷಣೆಯಲ್ಲಿದ್ದಳು. ಗೋಡೆಯ ಮೇಲೆ ಹಾಕುವ ಒಂದೊಂದು ಮಸಿಯ ಬೊಟ್ಟು ಆಕೆಯ ಹೃದಯದ ಭಾರವನ್ನು ಕಡಮೆ ಮಾಡುತ್ತಿದ್ದರೂ ಒಂದೊಂದು ದಿನ ಒಂದೊಂದು ವರ್ಷದಂತೆ ಕಳೆಯುತ್ತಿತ್ತು.

ಗೋಡೆಯ ಮೇಲೆ ಮಸಿಯ ಬೊಟ್ಟನ್ನು ಲೆಕ್ಕಮಾಡಿದಳು. ಎಂಬತ್ತೇಳುದಿನ ಬಾಕಿ ಇತ್ತು. ಮತ್ತೊಂದು ಮಸಿಯ ಬೊಟ್ಟನ್ನು ಹಾಕಿ ಪೂಜಾಪಾಠಗಳನ್ನು ಮುಗಿಸಿಕೊಂಡು ಬೇಗನೆ ಎಂಬತ್ತಾರು ದಿನ ಕಳೆಯುವಂತೆ ದೇವರನ್ನು ಪ್ರಾರ್ಥಿಸಿ ಗಂಡನ ಹತ್ತಿರ ಬಂದಳು. ಗಂಡನ ಹತ್ತಿರ ನೆರೆ ಹಳ್ಳಿಯ ಲಿಂಗಯ್ಯ ಕುಳಿತಿದ್ದ. ದುಗ್ಗಮ್ಮನನ್ನು ನೋಡಿ ಅವನು ಹೇಳಿದ, "ಕಳಸಯ್ಯನನ್ನು ಮೊನ್ನೆಯೇ ಜೈಲಿನಿಂದ ಬಿಟ್ಟರಂತೆ. ಆ ಕೆಳಕೇರಿ ನಾಗಯ್ಯ ನೋಡಿಕೊಂಡು ಬಂದನಂತೆ. ಯಾರದೊ ಮನೆಯ ಕೈಸಾಲೆಯಲ್ಲಿ ಕುಳಿತುಕೊಂಡಿದ್ದನಂತೆ."

ಆಗ ತಾನೆ ಮಸಿಯ ಬೊಟ್ಟನ್ನು ಲೆಕ್ಕ ಮಾಡಿಕೊಂಡು ಬಂದ ದುಗ್ಗಮ್ಮನಿಗೆ ಅವನ ಮಾತಿನಲ್ಲಿ ನಂಬಿಕೆ ಹುಟ್ಟಲಿಲ್ಲ. ನೋಡಿ ಬಂದವನು ನಾಗಯ್ಯ, ಹೇಳುವವನು ಲಿಂಗಯ್ಯ. ಇದೆಲ್ಲ ಅಂತೆ ಕಂತೆಯ ಮಾತು. ಯಾರನ್ನು ನೋಡಿ, ಕಳಸಯ್ಯ ಎಂದುಕೊಂಡನೋ ಎಂದು ದುಗ್ಗಮ್ಮ ಅವನ ಮಾತನ್ನು ನಂಬಲಿಲ್ಲ. ಮೊದಲಿನ ನಂಬಿಕೆಯ ಮಾತಿನಲ್ಲಿಯೇ ಲಿಂಗಯ್ಯ ಹೇಳಿದ, ಸುಮ್ಮನೆ ಅವರನ್ನು ನೋಡಲಿಲ್ಲಂತೆ ಅಮ್ಮಾ, ಮಾತ

ನಾಡಿಸಿ, 'ಬನ್ನಿ ಹೋಗೋಣ' ಎಂದು ಕರೆದನಂತೆ ಅವರು ಬರುವುದಿಲ್ಲ ಎಂದರಂತೆ.'

ಈಗ ದುಗ್ಗಮ್ಮನಿಗೆ ಬಾಯಿ ಕಟ್ಟಿದ ಹಾಗಾಯಿತು. ಒಳಗೆ ಹೋಗಿ ಮಸಿ ಬೊಟ್ಟುಗಳನ್ನು ಲೆಕ್ಕ ಮಾಡಿದಳು. ಇನ್ನು ಎಂಬತ್ತಾರು ಬಾಕಿ ಇವೆ. ಮನಸ್ಸಿನಲ್ಲಿ ಆನಂದ. ಬಿಡುಗಡೆಯಾಗಿದೆ ಎಂದು ನಂಬುವಹಾಗಿಲ್ಲ. ಗಳಿಗೆಗೊಂದು ಸಾರಿ ಹೆಬ್ಬಾಗಿಲಿಗೆ ಹೋಗಿ, ಅಣ್ಣಯ್ಯ ಬರುತಿರುವನೇ ಎಂದು ನೋಡಿಕೊಂಡು ಬರುವಳು. ಅವನನ್ನು ಬಿಟ್ಟಿರುವುದು ನಿಶ್ಚಯ ವಾಗಿದ್ದರೆ ಬಂದಿರ ಬೇಕಿತ್ತು, ಆದ್ದರಿಂದ ಅನುಮಾನ. ಸಾಯಂಕಾಲದ ವರೆಗೂ ಮನೆಯುವರೆಲ್ಲ ಕಳಸಯ್ಯನ ನಿರೀಕ್ಷಣೆಯಲ್ಲಿದ್ದರು. ಕಳಸಯ್ಯ ಬರಲಿಲ್ಲ. ನಂಬುವಂತೆಯೂ ಇಲ್ಲ, ನಂಬದಿರುವಂತೆಯೂ ಇಲ್ಲ. ಸಮಾ ಚಾರವನ್ನು ತಂದಿದ್ದ ಲಿಂಗಯ್ಯನಿಗೆ ಹೋಗಿ ನಿಜವಾದ ವರ್ತಮಾನವನ್ನು ತಿಳಿದು, ಬಿಡುಗಡೆಯಾಗಿದ್ದರೆ ಕಳಸಯ್ಯನನ್ನು ಕರೆದುಕೊಂಡು ಬರುವಂತೆ ಹಣಕೊಟ್ಟು ಕಳುಹಿಸಿದಳು.

ಲಿಂಗಯ್ಯ ಹೋದ ಎರಡನೆಯ ದಿನವೇ ಹಿಂತಿರುಗಿ ಬಂದ, ಜೊತೆ ಯಲ್ಲಿ ಕಳಸಯ್ಯನಿರಲಿಲ್ಲ. ಬಂದವನು ಹೇಳಿದ, "ಕಳಸಯ್ಯನನ್ನು ಬಿಟ್ಟಿ ರುವುದು ನಿಜ. ಒಬ್ಬರ ಮನೆಯ ಮುಂದೆ ಸುಮ್ಮನೆ ಕುಳಿತಿರುತ್ತಾರೆ. ನಾನು ನಿಮ್ಮ ಹೆಸರನ್ನು ಹೇಳಿ ಬರುವಂತೆ ಬಹಳ ಕರೆದೆ, ನಾನು ಕಲಿತ ಬುದ್ಧಿವಂತಿಕೆಯನ್ನೆಲ್ಲ ಖರ್ಚುಮಾಡಿದರೂ ಅವರು ಒಪ್ಪಲಿಲ್ಲ."

"ಇಷ್ಟು ಮುಂಚೆ ಹೇಗೆ ಬಿಡುಗಡೆಯಾಯಿತು?"

"ಜೈಲಿನಲ್ಲಿ ಒಳ್ಳೆ ನಡತೆಯಿಂದಿದ್ದರೆ ಸಜಾ ಕಡಮೆ ಮಾಡುತ್ತಾ ರಂತೆ. ಇವರ ನಡತೆಗೆ ಸಂತೋಷಪಟ್ಟು ಸರಕಾರದವರು ಮೂರು ತಿಂಗಳು ಕಡಮೆ ಮಾಡಿದರಂತೆ."

"ನನ್ನ ಅಣ್ಣ ಪುಂಡನೆಂದು ಜೈಲಿಗೆ ಹಾಕಿದರು. ಜೈಲಿನಲ್ಲಾದರೂ

ಒಳ್ಳೆಯವನೆಂದು ಸಜಾ ಕಡಮೆಮಾಡಿದರಲ್ಲ. ಸರಕಾರ ಪೂರಾ ಕುರುಡಲ್ಲ.''

" ಸರಕಾರ ದೇವರು ಎರಡು ಒಂದೇ ಅಲ್ಲವೆ ತಾಯಿ. ಸರಕಾರಕ್ಕೆ ಎಲ್ಲ ವಿಚಾರ ಗೊತ್ತಾಗುತ್ತದೆ. ಕಳಸಯ್ಯನಿಗೆ ಅನ್ಯಾಯವಾಯಿತೇ ವಿನಾ ಸರಕಾರ ಅನ್ಯಾಯ ಮಾಡಲಿಲ್ಲ."

"ನನ್ನ ಅಣ್ಣಯ್ಯನನ್ನು ಎಲ್ಲ ಸೇರಿ ಜೈಲಿಗೆ ಕಳುಹಿಸಿದರು ಲಿಂಗಣ್ಣ. ಅವನು ಯಾರಿಗೆ ಅನ್ಯಾಯ ಮಾಡಿದ್ದಾನೆ ಹೇಳು. ಕೊನೆಗಾದರು ಸರಕಾರಕ್ಕೆ ಅವನು ಒಳ್ಳೆಯವನೆಂದು ಗೊತ್ತಾಯಿತಲ್ಲ. ನನ್ನನ್ನು ವಿಚಾರಿಸಿದನೊ ?"

" ಈ ಕಡೆಯ ಒಬ್ಬರ ಹೆಸರನ್ನೂ ಎತ್ತಲಿಲ್ಲ. ನಾನೇ ಎಲ್ಲರ ವಿಚಾರವನ್ನು ತಿಳಿಸಿದೆ."

" ಅದಕ್ಕೇನು ಹೇಳಿದ ?"

" ಏನೂ ಹೇಳಲಿಲ್ಲ ; ಸುಮ್ಮನಿದ್ದರು.''

" ಏಕೆ ಬರಲಿಲ್ಲ ?''

" ಅವರೇತಕ್ಕೆ ಒರುವರು ? ತಿರುಗಿ ಜೈಲಿಗೆ ಕಳುಹಿಸುವುದಕ್ಕೆಯೇ?" ಎಂದು ನರಳುತ್ತಾ ಸೋಮಯ್ಯ ಹೇಳಿದ.

ಹೊಗೆ ಸೊಪ್ಪಿಗೆ ಸುಣ್ಣ ಹಾಕಿ ಚೆನ್ನಾಗಿ ತಿಕ್ಕುತ್ತಾ ಲಿಂಗಯ್ಯ ಹೇಳಿದ, " ಇಲ್ಲದ ವಿಚಾರವನ್ನು ಹೇಳಬಾರದು; ಅವರ ಬಾಯಿಂದ ಅಂಥ ಯಾವ ಮಾತೂ ಬರಲಿಲ್ಲ. ನಾನು ಬರುವುದಿಲ್ಲ ಎಂದು ಮಾತ್ರ ಹೇಳಿದರು.''

" ಸರಿ, ಅವನು ಹೇಳಿದ್ದು ನಿಜ " ಎಂದಳು ದುಗ್ಗಮ್ಮ.

## ಹದಿನೈದು

ಸೋಮಯ್ಯನ ಹಾಸಿಗೆಯ ತಲೆದಸಿಯಲ್ಲಿ ನೋಟುಗಳಿಂದ ತುಂಬಿದ ಕಬ್ಬಿಣದ ಪೆಟ್ಟಿಗೆ, ಪಕ್ಕದಲ್ಲಿ ಡಾಕ್ಟರು, ಸುತ್ತಲೂ ಸೇವಕರು.

ತಾನು ಹಿಂತಿರುಗಿ ಬರುವವರೆಗೂ ಎಚ್ಚರಿಕೆಯಿಂದ ರೋಗಿಯನ್ನು ನೋಡಿಕೊಳ್ಳುವಂತೆ ಎಲ್ಲರಿಗೂ ತಿಳಿಸಿ ದುಗ್ಗಮ್ಮ ಅಣ್ಣನನ್ನು ಕರೆದು ಕೊಂಡು ಬರಲು ತವುಲಕ್ಕಿಯಿಂದ ಹೊರಡಲು ಸಿದ್ಧಳಾದಳು. ಹೆಂಡತಿ ಹೊರಟಿರುವುದನ್ನು ನೋಡಿ ಸೋಮಯ್ಯ ಹೇಳಿದ, "ನನ್ನನ್ನು ಬಿಟ್ಟು ನೀನೊಬ್ಬಳೇ ಹೊರಟಿರುವಿ ಅಪರಾಧಿ ನಾನು, ನಾನೂ ಬರುತ್ತೇನೆ, ಜೊತೆಯಲ್ಲಿ ಕರೆದುಕೊಂಡು ಹೋಗು.''

ಎಲ್ಲರ ಕಣ್ಣು ದುಗ್ಗಮ್ಮನ ಕಡೆ.

ಗಂಡನ ಕಡೆ ನೋಡಿ ದುಗ್ಗಮ್ಮ ಹೇಳಿದಳು, '' ಹಾಸಿಗೆಯ ಮೇಲೆ ಹೊರಳಾಡಲೂ ಸಾಧ್ಯವಿಲ್ಲ, ಜ್ವರ ಉಕ್ಕುತ್ತಿದೆ, ಕರೆದುಕೊಂಡು ಹೋಗು ವುದಾದರೂ ಹೇಗೆ ? ನಾನು ನಾಳೆಯೇ ಅಣ್ಣಯ್ಯನನ್ನು ಕರೆದುಕೊಂಡು ಬರುತ್ತೇನೆ."

"ಜೈಲಿಗೆ ಕಳುಹಿಸಿದವನು ನಾನು, ಆದ್ದರಿಂದ ಕರೆದುಕೊಂಡು ಬರುವುದಕ್ಕೆ ನಾನೇ ಹೋಗಬೇಕು. ದಾರಿಯ ಮೇಲೆ ಪ್ರಾಣ ಹೋದರೆ ಮಾಡಿದ ಅಪರಾಧಕ್ಕೆ ಶಿಕ್ಷೆಯಾಯಿತು, ಇಲ್ಲದಿದ್ದರೆ ಅವರ ಕಾಲು ಹಿಡಿದುಕೊಂಡು ಕ್ಷಮೆ ಬೇಡುತ್ತೇನೆ.

"ಈಗಿನ ಸ್ಥಿತಿಯಲ್ಲಿ ಹೊರಗೆ ಸಹ ಹೋಗುವ ಹಾಗಿಲ್ಲ, ನಾನು ಹೋಗಿ ಬರುತ್ತೇನೆ. ನಿಮ್ಮ ತಪ್ಪನ್ನೆಲ್ಲ ನಾನು ತಲೆಯಮೇಲೆ ಹೊತ್ತಿರು ವೆನು. ನೀವು ಮಾಡಿರುವ ತಪ್ಪು ನಾನು ಮಾಡಿದ ಹಾಗೆಯೆ"

ಮಾತನಾಡದೆ ಸೋಮಯ್ಯ ಹಾಗೆ ಮಲಗಿಕೊಂಡ.

ಉದ್ವೇಗ, ಚಿಂತೆ, ಪಶ್ಚಾತ್ತಾಪ, ಕಳಂಕಗಳ ಜೊತೆಯಲ್ಲಿ ದುಗ್ಗಮ್ಮ ಜಗುಲಿಯಿಂದ ಅಂಗಳ ಇಳಿದಳು. ಅಂಗಳದಲ್ಲಿರುವ ತುಳಸಿ ಕಟ್ಟೆಗೆ ಪ್ರದಕ್ಷಿಣೆ ಬಂದು, ನಮಸ್ಕಾರ ಮಾಡಿ, ತನ್ನ ಕಾರ್ಯವನ್ನು ಸಾಂಗವಾಗಿ ನೆರವೇರಿಸುವಂತೆ ಪ್ರಾರ್ಥಿಸಿ, ಹೊರಟಳು. ಪೇಟೆ ತಲಪುತ್ತಲೇ ದುಗ್ಗಮ್ಮ ಬೇಗ ಅಲ್ಲಿ ಕಾಣಿಸಿಕೊಳ್ಳದೆ, ಕಳಸಯ್ಯನಿರುವ ಸ್ಥಳವನ್ನು ನೋಡಿಕೊಂಡು ಬರುವಂತೆ ಲಿಂಗಯ್ಯನನ್ನು ಮುಂದೆ ಕಳುಹಿಸಿಕೊಟ್ಟಳು. ಕಳಸಯ್ಯ ಹಿಂದೆ ಇದ್ದ ಸ್ಥಳದಲ್ಲಿಯೇ ಬೀದಿಯ ಭಿಕಾರಿಯಂತೆ ಕುಳಿತಿದ್ದ. ಅವನು ಇರುವ ಸ್ಥಳ ತಿಳಿದ ಮೇಲೆ ದುಗ್ಗಮ್ಮ ಬಂದಳು. ದುಗ್ಗಮ್ಮನು ಮುಂದೆ ಬಂದ ತಕ್ಷಣ ಕಳಸಯ್ಯ ಅಡ್ಡಮೋರೆ ಹಾಕಿಕೊಂಡು, ಹೊರಡಲು ಸಿದ್ಧನಾದ. ಅವನನ್ನು ನೋಡಿದ ತಕ್ಷಣ ತಂಗಿತನದ ಕೋಡಿ ಅನಾಯಾಸದಿಂದ ಒಡೆಯಿತು. ಹೋಗಿ ದೊಪ್ಪನೆ ಅಣ್ಣನ ಕಾಲಿನ ಮೇಲೆ ಬಿದ್ದು, ಕಾಲನ್ನು ಗಟ್ಟಿಯಾಗಿ ಹಿಡಿದುಕೊಂಡು ಅಳುತ್ತಾ ಹೇಳಿದಳು, "ನಾನು ತಂದೆಯ ಮುಖವನ್ನು ಕಂಡವಳಲ್ಲ, ತಾಯಿ ಮೊನ್ನೆಯವರೆಗೆ ಬದುಕಿದ್ದರೂ ನನಗೆ ನೀನೇ ತಾಯಿ ತಂದೆಯಂತೆ ಸಾಕಿ ಸಲುಹಿದೆ. ನೀನೇ ಮದುವೆ ಮಾಡಿದೆ. ನೀನು ಒಪ್ಪಿದವರ ಕೈಗೆ ನಾನು ಕಂಕಣ ಕಟ್ಟಿದೆ. ಇಂದಿನವರೆಗೂ ಅವರ ವಸ್ತುವಾಗಿ, ಅವರ ನೆರಳಾಗಿ ನಡೆದುಕೊಂಡು ಬಂದಿದ್ದೇನೆ. ನಿಮ್ಮ ವಿಚಾರಗಳು ನನಗೆ ಗೊತ್ತಿಲ್ಲ; ನನಗೆ ಬೇಡ. ಈಗ ನನ್ನ ಮಂಗಳ ಸೂತ್ರ ನಿನ್ನ ಕೈಯಲ್ಲಿದೆ. ನೀನು ಬರದಿದ್ದರೆ ಖಂಡಿತ ಬದುಕುವ ಆಶೆಯಿಲ್ಲ."

ತಂಗಿಯ ಕೈಯಿಂದ ಕಾಲನ್ನು ಬಿಡಿಸಿಕೊಳ್ಳಲು ಪ್ರಯತ್ನ ಪಡುತ್ತಾ ಕಳಸಯ್ಯ ಹೇಳಿದ, "ನಾನು ಮಾಡಬೇಕಾದ ಕರ್ತವ್ಯವಿತ್ತು ಮಾಡಿ ಮುಗಿಸಿದೆ. ಈಗ ನನಗೂ ಅದಕ್ಕೂ ಸಂಬಂಧವಿಲ್ಲ."

"ಎಲ್ಲಿ ನಿನ್ನ ಕರ್ತವ್ಯ ಮುಗಿಯಿತೋ ಅಲ್ಲಿಂದ ನನ್ನ ಕರ್ತವ್ಯ ಪ್ರಾರಂಭವಾಗಿದೆ. ನೀನು ಬಿಟ್ಟಲ್ಲಿಗೂ ನನಗೂ ಸಂಬಂಧವಿದೆ. ಆದ್ದರಿಂದಲೇ

ನಿನ್ನ ಹತ್ತಿರ ಭಿಕ್ಷೆ ಬೇಡುತ್ತಿದ್ದೇನೆ. ನಾನು ಹುಟ್ಟಿ ಬೆಳೆದ ಮನೆತನಕ್ಕೆ ನಾನು ದ್ರೋಹ ಬಗೆದೆ. ನನಗೆ ಈಗ ಭಿಕ್ಷೆ ಕೊಡು, ನನ್ನ ಮುತ್ತೈದೆ ತನವನ್ನು ಕಾಪಾಡು. ನೀನು ಬರದಿದ್ದರೆ ಖಂಡಿತ ಪ್ರಾಣ ಉಳಿಯು ವುದಿಲ್ಲ. ನೀನು ಜೈಲಿನೊಳಗೆ ಯಮಯಾತನೆ ಭೋಗಿಸಿದೆ, ಅವರು ಮನೆಯಲ್ಲಿ ಭೋಗಿಸುತಿದಾರೆ.''

"ನಾನು ಯಾರಿಗೂ ಅಪರಾಧ ಮಾಡದೆ ಭೋಗಿಸಿ ಬಂದಿದ್ದೇನೆ."

"ಅಪರಾಧಿಗಳು ಈಗ ತಪ್ಪಿಸಿಕೊಂಡರೂ ಮುಂದೆ ಭೋಗಿಸುವುದಕ್ಕೆ ಬುತ್ತಿ ಇಟ್ಟಿರುತ್ತದೆ."

"ಅಪರಾಧ ಮಾಡದೆ ಭೋಗಿಸಿ ಬಂದೆ. ನಾನೂ ಯಾರಿಗೂ ಭೋಗಿಸುವಂತೆ ಮಾಡಲಿಲ್ಲ, ನನಗೆ ಅಷ್ಟೇ ಬೇಕಾದ್ದು.''

"ನೀನು ಮಾಡದೆ ಇಷ್ಟು ಭೋಗಿಸಬೇಕಾಯಿತು, ಮಾಡಿದವರು ಎಷ್ಟು ಭೋಗಿಸಬೇಕಾದೀತು ?''

ಇದೇ ರೀತಿ ಬಹಳ ಸಮಯದವರೆಗೂ ಅಣ್ಣತಂಗಿಗೆ ಮಾತು ಕಥೆ ನಡೆಯಿತು. ಒಬ್ಬರೂ ಜಗ್ಗಲಿಲ್ಲ. ಇಬ್ಬರೂ ಕೇಳಮನೆಯವರು. ದುಗ್ಗಮ್ಮ ಅಣ್ಣನ ಹತ್ತಿರ ಮಾತನಾಡುತ್ತಿದ್ದರೂ ಮನಸ್ಸೆಲ್ಲ ಮನೆಯ ಮೇಲಿತ್ತು.

"ಹಾಗಾದರೆ ನನ್ನದೊಂದು ಮಾತನ್ನು ನಡೆಸುವುದಾದರೆ ಬರುತ್ತೇನೆ" ಎಂದ ಕಳಸಯ್ಯ.

ಎಲ್ಲರ ಮನಸ್ಸಿನಲ್ಲಿಯೂ ಆಶೆಯ ಕಿರಣ ಒಡೆಯಿತು.

ಕಾಲು ಹಿಡಿದುಕೊಂಡು ಅಡ್ಡಬಿದ್ದಿರುವ ದುಗ್ಗಮ್ಮ ಮುಂಡಿಯೂರಿ

ಕುಳಿತು ಹೇಳಿದಳು, " ನನ್ನ ಮಾತನ್ನು ಯಾವಾಗ ನೀನು ನಡೆಸುತ್ತೀ ನಿನ್ನ ಮಾತನ್ನು ಖಂಡಿತ ನಡೆಸುತ್ತೇನೆ."

" ಭಾವನಿಗೆ ಕಾಯಿಲೆ ಗುಣಮುಖವಾದ ತಕ್ಷಣ ನನ್ನನ್ನು ಬಿಡಬೇಕು."

" ನೀನು ಅಷ್ಟು ಮಾಡಿದರೆ ಸಾಕು''

ನಿರಪರಾಧಿಯಾದ ದುಗ್ಗಮ್ಮನಿಗೆ ಜಯ ಲಭಿಸಿತು. ಅಣ್ಣ ತಂಗಿಯರಿಬ್ಬರೂ ತಲಮಕ್ಕಿಗೆ ಬಂದರು. ಸೋಮಯ್ಯ ದಿಂಬಿನ ಮೇಲೆ ತಲೆಯನ್ನಿಟ್ಟುಕೊಂಡು ಹೆಬ್ಬಾಗಿಲ ಕಡೆ ನೋಡುತ್ತಾ ಮಲಗಿದ್ದ. ಡಾಕ್ಟರು ಡಿಗ್ರಿ ನೋಡಿ ಇನ್‌ಜೆಕ್ಷನನ್ನು ಕೊಡುವುದರಲ್ಲಿ ತೊಡಗಿದ್ದರು. ಮನೆಯ ಮುಂದೆ ಗಾಡಿಯೊಂದು ಬಂದು ನಿಂತಿತು. ದುಗ್ಗಮ್ಮ ಅಣ್ಣನೊಂದಿಗೆ ಗಾಡಿಯಿಂದಿಳಿದು ರೋಗಿಯ ಬಳಿ ಬಂದಳು. ಕಳಸಯ್ಯನನ್ನು ನೋಡಿ ಸೋಮಯ್ಯನ ಕಣ್ಣಿನ ಕೋಡಿ ಒಡೆಯಿತು. ಸೋಮಯನ ಕಣ್ಣನ್ನು ಒರೆಸುತ್ತಾ ಕಳಸಯ್ಯ ಕಣ್ಣೀರನ್ನು ಹರಿಸಿದ. ನೆಂಟಭಾವನ ಕಣ್ಣುಗಳನ್ನು ನೋಡಿದ ದುಗ್ಗಮ್ಮನ ಕಣ್ಣುಗಳು ಒದ್ದೆಯಾದವು. ಮೂರು ಮಂದಿಯೂ ಮೌನವಾಗಿದ್ದರು, ಮೂರು ಮಂದಿಯ ಕಣ್ಣೂ ಒದ್ದೆಯಾಗಿದ್ದವು.

## ಹದಿನಾರು

ಸೋಮಯ್ಯನ ಹಾಸಿಗೆಯ ಸುತ್ತಲಿದ್ದ ಡಾಕ್ಟರೂ ಸೇವಕ ಸೇವಕಿಯರೂ ದೂರ ಸರಿದರು. ದುಗ್ಗಮ್ಮನೂ ರೋಗಿಯ ಹತ್ತಿರ ಹೆಚ್ಚು ಬರುತಿರಲಿಲ್ಲ. ರುಚಿಯಾದ ಅಡುಗೆ, ಪೂಜಾಪಾಠದಲ್ಲಿರುತ್ತಿದ್ದಳು, ಕಳಸಯ್ಯ ರೋಗಿಯ ಶೂಶ್ರೂಷೆಯಲ್ಲಿ. ಕ್ರಮೇಣ ಸೋಮಯ್ಯ ಹಾಸಿಗೆಯ

ಮೇಲೆದ್ದು ಕೂರುವ ಹಾಗಾದ. ಪಥ್ಯ, ಪಾನ, ಔಷಧಿ, ಆಸ್ಪತ್ರೆಯ ಮಾತು ಕಥೆ ಹೊಲಗದ್ದೆಗಳ ಕಡೆ ಹೋಯಿತು. ಕಳಸಯ್ಯ ಜೈಲಿಗೆ ಹೋದಂದಿನಿಂದ ಕೆಳಮನೆಯ ಕಡೆ ಒಬ್ಬರೂ ಮುಖ ಹಾಕಿರಲಿಲ್ಲ, ಅಡಕೆ ಕೊನೆ ಕಿತ್ತಿರಲಿಲ್ಲ. ಮನೆ ಹಾಳು ಸುರಿಯುತ್ತಿತು ; ಗದ್ದೆ ಜಡ್ಡು ಹಿಡಿದಿತ್ತು ; ತೋಟ ಹಾಳುಗೂಡಿತ್ತು.

ಮನೆಗೆ ಬೆಂಕಿ ಹತ್ತಿದಾಗ ಸಾಮಾನುಗಳನ್ನು ಕಿತ್ತೆಸೆಯುವ ಗಲಾಟೆ, ಗೃಹ ಪ್ರವೇಶದಲ್ಲಿ ಅಂದವಾಗಿ ಜೋಡಿಸುವ ಯೋಚನೆ.

ಬೇಸಗೆಯ ದಗೆ, ಎಲ್ಲರ ಕಣ್ಣು ಆಕಾಶದ ಕಡೆ ಬೆಳೆಯ ಮೋಡ ಅಲ್ಲಿ ಇಲ್ಲಿ ತೋರಿ ಮರೆಯಾಗುತ್ತಿದ್ದವು. ಗಾಳಿ ಎಲ್ಲರ ಕಣ್ಣಿನ ಮೇಲೂ ಧೂಳನ್ನು ಎರಚುತ್ತಿತ್ತು. ರೈತರು ಮನೆಗೆ ಕಟಿಕೆಯನ್ನೂ ಗದ್ದೆಗೆ ಗೊಬ್ಬರವನ್ನೂ ಹೊಡೆಯುವ ತರಾತುರಿಯಲ್ಲಿದ್ದರು. ಸೋಮಯ್ಯ ದಿಂಬಿಗೊರಗಿಕೊಂಡು ಬೀಸಣಿಗೆಯಲ್ಲಿ ಗಾಳಿ ಬೀಸಿಕೊಳ್ಳುತ್ತಿದ್ದ. ಅವನ ಪಕ್ಕದಲ್ಲಿ ಕಳಸಯ್ಯ ಕುಳಿತಿದ್ದ. ದುಗ್ಗಮ್ಮ ಗಂಡನಿಗೆ ಗಂಜಿಯನ್ನೂ ಅಣ್ಣನಿಗೆ ಕಾಫಿ ತಿಂಡಿಯನ್ನೂ ತಂದಳು. ಗಂಜಿ ಸ್ವಲ್ಪ ಬಿಸಿಯಾಗಿದ್ದುದರಿಂದ ದುಗ್ಗಮ್ಮ ಕುಳಿತುಕೊಂಡು ಆರಿಸುತ್ತಾ ಅಣ್ಣನಿಗೆ ಹೇಳಿದಳು, " ಹಾಸಿಗೆಯ ಮೇಲೆದ್ದು ಕೂರುವ ಹಾಗೆ ಮಾಡಿ ನನ್ನನ್ನುಳಿಸಿದೆ. ಇನ್ನು ಮನೆಯ ಕಡೆ ಹೋಗಿ ನಿನ್ನ ಗದ್ದೆ, ಗಣ್ಣ ತೋಟತುಡಿಗೆಯನ್ನು ನೋಡಿಕೊ. ಮೊದಲೂ ಹೀಗೆ ನಮ್ಮ ಕಾಯಿಲೆ ಕಲಾಲೆಯಲ್ಲಿ ಮನೆ ಕೆಲಸವನ್ನೆಲ್ಲ ಹಾಳುಮಾಡಿಕೊಂಡೆ. ಅದಕ್ಕೆ ನಿನ್ನನ್ನು ಜೈಲಿಗೆ ಕಳುಹಿಸಿದೆವು. ಇನ್ನಾದರು ನಿನ್ನ ಕೆಲಸ ಕಾರ್ಯದಲ್ಲಿ ನೀನಿರು "

ಗಂಜಿಯನ್ನು ಬಾಯಿಯ ಹತ್ತಿರ ತೆಗೆದುಕೊಂಡು ಹೋದ ಸೋಮಯ್ಯ ಲೋಟವನ್ನು ಹಾಗೆಯೇ ಹಿಡಿದುಕೊಂಡು ಹೇಳಿದ, " ಆಗ ಬಾರದ ವಿಚಾರ ಆಗಿಹೋಯಿತು. ಅದನ್ನು ಮನಸ್ಸಿಗೆ ಹಚ್ಚಿಕೊಳ್ಳ

ಬೇಡಿ. ಯಾವುದೋ ಜನ್ಮದ ಹಗೆತನ ಈ ಜನ್ಮದಲ್ಲಿ ತೀರಿತು. ಇನ್ನಾದರೂ ನಾವು ಅನ್ಯೋನ್ಯತೆಯಿಂದ ಸುಖವಾಗಿ ಬದುಕೋಣ. ಇಲ್ಲಿಂದಲೇ ಆಳು ಕಾಳುಗಳನ್ನು ಕರೆದುಕೊಂಡು ಹೋಗಿ ಮುಂದಿನ ಬೇಸಾಯಕ್ಕಾದರೂ ಸಿದ್ಧಮಾಡಿ. ಮನೆ ರಿಪೇರಿಯಾಗುವ ವರೆಗೆ ಇಲ್ಲಿಯೇ ಇರಿ."

ಇವರಿಬ್ಬರ ಮಾತು ಕಳಸಯ್ಯನಿಗೆ ಅರ್ಥವಾಗಲಿಲ್ಲ. ಇಬ್ಬರ ಮುಖವನ್ನೂ ನೋಡಿದ.

ಚಂದ್ರಯ್ಯನ ಮರಣ, ಆತನ ಮರಣಶಾಸನದ ವಿಚಾರ ತಲಮುಕ್ಕಿಗೆ ಬಂದ ಮೂರನೆಯ ದಿನವೇ ಕಳಸಯ್ಯನಿಗೆ ತಿಳಿದಿತ್ತು, ಮುಂದಿನ ವಿಚಾರ ಆತನಿಗೆ ತಿಳಿಯದು. ಕುಡಿಯುತಿರುವ ಗಂಜಿಯನ್ನು ಕೆಳಗಿಟ್ಟು ಸೋಮಯ್ಯ ಹೇಳಿದ, " ಗಂಡನು ಮಾಡುವ ಪಾಪಪುಣ್ಯಕ್ಕೆ ಹೆಂಡತಿಯೂ ಭಾಗಿಯಾಗುತ್ತಾಳೆ. ನಾನು ನಿಮಗೆ ಮಾಡಿದ ಅನ್ಯಾಯಕ್ಕೆ ನನ್ನ ಹೆಂಡತಿ ಪ್ರಾಯಶ್ಚಿತ್ತ ಮಾಡಿಕೊಂಡಳು. ಚಂದ್ರಯ್ಯನಿಂದ ಬಂದ ಹಣಕ್ಕೆ ತನ್ನ ಒಡವೆ ವಸ್ತುಗಳನ್ನೆಲ್ಲ ಮಾರಿ ಹದಿನೈದುಸಾವಿರ ರೂಪಾಯಿ ಒಟ್ಟಿಗೆ ಮಾಡಿ ನಿಮ್ಮ ಹೆಸರಿನಲ್ಲಿ ಕೋರ್ಟಿಗೆ ಕಟ್ಟಿದ ಮೂಲಕ ಆ ಹಣ ನನಗೆ ಪಾವತಿಯಾಯಿತು. ಈಗ ನೀವು ಅಲ್ಲಿಗೆ ಹೋಗಿ ನಿಮ್ಮ ಗದ್ದೆ, ಒಡ್ಡು, ಬೇಲಿಯನ್ನೆಲ್ಲ ಸರಿಮಾಡಿಕೊಳ್ಳಿ."

ಕಳಸಯ್ಯ ಬಳ ಬಳನೆ ಕಣ್ಣೀರು ಸುರಿಸಿದ. ಕಳಸಯ್ಯನ ಕಣ್ಣೀರನ್ನು ನೋಡಿ, ದುಗ್ಗಮ್ಮ, ಸೋಮಯ್ಯನಿಗೆ ತಡೆಯುವುದಕ್ಕಾಗಲಿಲ್ಲ. ಎಲ್ಲರ ಕಣ್ಣಲ್ಲಿಯೂ ಕಡಲು ತುಂಬಿತು. ಒಬ್ಬೊಬ್ಬರಿಗೂ ಒಂದೊಂದು ರೀತಿಯಲ್ಲಿ ಸುಖದುಃಖದ ಕಾವುತಾಗಿತು. ಕಳಸಯ್ಯನಿಗೆ ತನ್ನ ತಂಗಿಯ ಸ್ವಭಾವ ಚೆನ್ನಾಗಿ ಗೊತ್ತಿತ್ತು. ಉಡುವ, ತೊಡುವ ಆಕೆಯ ಆಶೆಗೆ ಮೇರೆ ಇರಲಿಲ್ಲ. ಪ್ರತಿಯೊಂದು ವಸ್ತುವನ್ನೂ ಪ್ರಾಣದಂತೆ ನೋಡುತ್ತಿದ್ದಳು. ಆಕೆಗೆ ವಯಸ್ಸಾದರೂ ಎಷ್ಟು ? ಹಲ್ಲುದುರಿ, ಕೂದಲು ನರೆ

ತಿರುವ ಹೆಂಗಸರೇ ಶೃಂಗಾರ ಮಾಡಿಕೊಂಡು ಸಿನಿಮಾ ಮಂದಿರಗಳಿಗೆ ಹೋಗುತಿರುವ ಈ ಕಾಲದಲ್ಲಿ ಉಡುವ ತೊಡುವ ಪ್ರಾಯದಲ್ಲಿರುವ ದುಗ್ಗಮ್ಮನ ವಿಚಾರ ಹೇಳಬೇಕೇ ? ಅಂಥ ಸ್ವಭಾವ ಮತ್ತು ವಯಸ್ಸಿನವಳು ನನ್ನ ಸರ್ವಸ್ವವನ್ನೂ ಅಣ್ಣನಿಗೆ ಅರ್ಪಿಸಿರುವಳೆಂದರೆ ಆಕೆಯ ತ್ಯಾಗದ ಆಳ ಎಷ್ಟಿರಬಹುದು ? ಗಾಯ ಎಷ್ಟು ಹಣ್ಣಾಗಿರಬಹುದು ? ಕಳಸಯ್ಯನ ಮುಖ ಮಸಿಯೂಡಿದಂತಾಯಿತು. ಆತ್ಮ ಜ್ಞಾನಿಯಿಂದ ಮುಖ ಮುಚ್ಚಿಕೊಂಡ.

ಕಳಸಯ್ಯನ ಈ ಸ್ಥಿತಿಯನ್ನು ನೋಡಿ ಗಂಡ ಹೆಂಡತಿ ಸುಖಿಗಳಾಗಲಿಲ್ಲ. ದೂರದ ದುಃಖದ ಮೊಳಕೆ ಚಿಗುರಿತು. ಸೋಮಯ್ಯ, ದುಗ್ಗಮ್ಮ ಮಾತು ಮುಂದುವರಿಸುವ ಸಾಹಸಕ್ಕೆ ಹೋಗಲಿಲ್ಲ. ದುಃಖವನ್ನು ನುಂಗಿಕೊಳ್ಳುತ್ತಾ ಕಳಸಯ್ಯ ಹೇಳಿದ, " ಅಕ್ಕಾ ! ಚಂದ್ರಯ್ಯ ಮನುಷ್ಯನಲ್ಲ ದೇವತೆ. ಅಂಥಾ ದೇವತೆಯ ಧರ್ಮತಂಗಿ ನೀನು. ಯಾವುದೋ ಜನ್ಮದ ಋಣಬಾಕಿ ಇದ್ದುದರಿಂದ ಭಾವ ನನಗೆ ಜೈಲಿಗೆ ಹೋಗುವಂತೆಮಾಡಿದರು. ನಿನಗೆ ಕೊಟ್ಟು ನಡೆಸಬೇಕಾದ್ದು ನನ್ನ ಧರ್ಮ. ನಾನು ಪಾಪಿ, ನನ್ನಿಂದ ಮಾಡಲಾಗಲಿಲ್ಲ, ಚಂದ್ರಯ್ಯನೇ ಪುಣ್ಯವಂತ. ನಿನ್ನ ದುಡ್ಡಿನಲ್ಲಿ ನಾನು ಆಸ್ತಿ ತೆಗೆದುಕೊಂಡು, ಮುಂದಿನ ಜನ್ಮದಲ್ಲಿ ನಿನ್ನ ಕೈಯಿಂದ ಜೈಲಿಗೆ ಹೋಗಲೇ ! ನಿನ್ನ ದುಡ್ಡಿನಲ್ಲಿ ಜೀವಿಸಿದ ಆ ಪಾಪವನ್ನು ತೊಳೆಯಲು ಯಾವ ನದಿಗೆ ಹೋಗಲಿ ?"

ಎಲ್ಲರೂ ಸುಮ್ಮನಿದ್ದರು.

" ನಿಮಗೆ ವಾಸಿಯಾಯಿತು, ನಾನಿನ್ನು ಹೊರಡುತ್ತೇನೆ ಭಾವ ." ಎಂದು ಹೇಳಿ ಕಳಸಯ್ಯ ಎದ್ದು ನಿಂತ.

" ಬೇಡ, ಜಮೀನು ಬೇಡದೆಹೋದರೆ ಬಿಡಿ, ನೀವು ನಾಲ್ಕು ದಿನ ಇದ್ದು ಹೋಗಿ " ಎಂದು ಗಂಡ ಹೆಂಡತಿ ಒಂದೇ ಧ್ವನಿಯಲ್ಲಿ ಹೇಳಿದರು.

“ನನ್ನನ್ನು ತಡೆಯಬೇಡಿ, ನನ್ನ ಮನಸ್ಸಿನಲ್ಲಿ ಕಳವಳವಾಗುತಿದೆ. ಇಲ್ಲಿದ್ದರೆ ಇನ್ನೇನು ಮೋಹ ಹುಟ್ಟುವುದೋ ಹೊರಡುತ್ತೇನೆ” ಎಂದು ಹೇಳಿ ಕಳಸಯ್ಯ ಮುಂದೆ ಹೆಜ್ಜೆ ಹಾಕಿದ.

ಸೋಮಯ್ಯ ಹೆಂಡತಿಯ ಸಹಾಯದಿಂದ ಎದ್ದು ಹೆಬ್ಬಾಗಿಲವರೆಗೆ ಬಂದ. ಹಿಂದಕ್ಕೆ ತಿರುಗಿನೋಡದೆ ಕಳಸಯ್ಯ ಕಾಲು ಬೀಸಿ ಹಾಕಿದ. ದುಗ್ಗಮ್ಮ ಅವನನ್ನು “ಅಣ್ಣಯ್ಯ” ಎಂದು ಕರೆದಳು. ಬೆನ್ನು ತಿರುಗಿಸಿದ ಕಳಸಯ್ಯ ತಿರುಗಿ ಮುಖಮಾಡಲಿಲ್ಲ. ತಲೆಹಿಡಿದು ಅಲ್ಲೇ ಕುಳಿತುಕೊಂಡು ದುಗ್ಗಮ್ಮ ಹೇಳಿದಳು, “ಅಣ್ಣಯ್ಯ ನಮ್ಮನ್ನೆಲ್ಲ ಬಿಟ್ಟು ಹೊರಟೇಹೋದ. ಈ ಆಸ್ತಿ, ದುಡ್ಡನ್ನೆಲ್ಲಾ ಕಟ್ಟಿಕೊಂಡು ಏನುಮಾಡುವುದು? ನಾವು ಹುಟ್ಟುತ್ತಾ ಮಕ್ಕಳನ್ನಾಗಲೀ, ಬಂಧುಬಳಗದವರನ್ನಾಗಲೀ ಪಡೆದು ಕೊಂಡು ಬರಲಿಲ್ಲ. ದುಡ್ಡನ್ನು ಪಡೆದುಕೊಂಡು ಬಂದೆವು. ಅದರಿಂದ ಇದ್ದ ಅಣ್ಣನನ್ನೂ ಕಳೆದುಕೊಂಡೆ.”

“ನಾನು ಮನುಷ್ಯನನ್ನು ನೋಡಲಿಲ್ಲ, ಇಪ್ಪತ್ತೈದು ಅಡಕೆ ಮರವ ಜಾಗವನ್ನು ನೋಡಿದೆ.”

“ನಮ್ಮ ಮಕ್ಕಳೇನು? ಅಣ್ಣಯ್ಯನ ಮಕ್ಕಳೇನು? ಎಲ್ಲ ಅವನ ಮಕ್ಕಳ ಹೆಸರಿಗೆ ಬರೆದು ಹಾಕಿ, ಮಾಡಿದ ಪಾಪ ಹಾಗಾದರೂ ತೀರಲಿ. ಬಿಡಬೇಕಾದ ಸಮಯದಲ್ಲಿ ಕೊಡು ಎಂದು ಹಟಮಾಡಿದಿರಿ.”

“ಈಗ ಕೊಡುವಾಗ ತೆಗೆದುಕೊಳ್ಳುವವರಿಲ್ಲ.”

“ನೆಂಟಭಾವ ಎಂದರೆ ಹೀಗೆ”

“ಶತ್ರು ಮಿತ್ರರಂತೆ”



# ಸಿದ್ಧೌಷಧಿ

## ಒಂದು

ಕರಡೊಳ್ಳಿ ಸಿದ್ದಪ್ಪನ ಕೂದಲು ಗುತ್ತಿಗೆ ಮತ್ತು ಬಡ್ಡಿಯ ಸಂದಾಯದಲ್ಲಿ ಬೆಳ್ಳಗಾಗಿತ್ತು. ಹುಲಿಯ ಭತ್ತ ಹೊತ್ತು ನೆತ್ತಿಯ ಕೂದಲುದುರಿತ್ತು. ಜೀವನದಲ್ಲಿ ಸುಖ ಕಂಡರಿಯ. ಯಾವಾಗಲೂ ಹೊಲ, ತೋಟ, ಬೇಸಾಯದ ಹಂಬಲ. ಮನೆಯಲ್ಲಿರುವುದು ಅಪರೂಪ; ತೋಟ, ಅಥವಾ ಗದ್ದೆ ಅವನ ವಾಸಸ್ಥಳ. ಮಳೆ ಬಿಸಿಲೇ ಅವನಿಗೆ ಹೆದರುತ್ತಿದ್ದವು. ಎಲ್ಲಿಯಾದರೂ ಗದ್ದೆ ಅಥವಾ ತೋಟದಲ್ಲಿ ಕರಡೊಳ್ಳಿಸಿದ್ದಪ್ಪನಿಲ್ಲವೆಂದಾದರೆ ಸಾಲ ಕೊಟ್ಟ ಧನಿಗಳ ಮನೆಯಲ್ಲಿ ಹಾಜರಿರುವುದು ಖಂಡಿತ. ತನ್ನ ಜೀವನದಲ್ಲಿ ಈ ಮೂರು ಸ್ಥಳ ವಿನಾ ಬೇರಾವುದನ್ನೂ ಕಂಡರಿಯ.

ಅವನ ಯೌವನ ಗದ್ದೆ, ಕಣ, ಸಾಹುಕಾರರ ಮನೆಯ ತಿರುಗಾಟದಲ್ಲಿ ಕಳೆಯಿತು. ಹಂಬಲ ಆಧಾರವಿಲ್ಲದ ಹಂಬಿನಂತೆ ಕುಸಿದು ಬಿದ್ದಿದ್ದರೂ ಕುಡಿ ಒಡೆದು ಹಬ್ಬುತ್ತಿತ್ತು.

ರೈತರಿಗೆ ಬೆಳೆ ಕೈಗೆ ಸಿಗುವುದು ತಪಸ್ಸಿನ ಕೊನೆಯಲ್ಲಿ ಸಿದ್ಧಿ ಸಿಗುವಂತೆ ವರ್ಷಕ್ಕೊಮ್ಮೆ. ಆ ಬೆಳೆಗೆ ಬಾಯಿಬಿಟ್ಟು ಕಾದಿರುವವರು. ಹಲವಾರು ವರ್ಷವೆಲ್ಲ ದುಡಿದರೆ ಕೊನೆಯಲ್ಲಿ ಪೈರು. ಪೈರು ಕಣಕ್ಕೆ ಬರುವುದುತಡ ಸಾಲ, ಜಮಿನಾನುಗಳನ್ನು ಕೊಟ್ಟವರು ಬಂದು ತಲೆಯ ಮೇಲೆ ಕುಳಿತುಕೊಳ್ಳುವರು. ಸಾಲ, ಗುತ್ತಿಗೆಗೆ ಭತ್ತವೆಲ್ಲಾ ಅಳೆದು ಹೋಗುವುದು. ಮನೆಗೆ ಬೆಳೆ ಬಂದು ತಿಂಗಳಾಗುತಿರಲಿಲ್ಲ ಸಿದ್ದಪ್ಪನ ಕೈ ಖಾಲಿ. ತಿರುಗಿ ಮುಂದಿನ ಬೆಳೆಯ ಯೋಚನೆ, ಅದರ ಆಧಾರದ ಮೇಲೆ ಸಾಲ.

ಬರಿ ಕೈಯಲ್ಲಿ ಮೊಳ ಹಾಕಿ ಹಾಕಿ ಒಂದು ಸಾರಿ ಸಿದ್ದಪ್ಪ ಕಬ್ಬು ನೆಡಲು ಮನಸ್ಸು ಮಾಡಿದ. ಜನರು ಹೆಚ್ಚಾಗಿ ಬೆಲ್ಲ ಉಪಯೋಗಿಸುತ್ತಾರೆ, ಎಲ್ಲರ ಮನೆಯಲ್ಲಿಯೂ ಕಾಫಿ, ಆದ್ದರಿಂದ ತಾನು ಕಬ್ಬು ಬೆಳೆದರೆ ಕೈಗೆ ನಾಲ್ಕು ಕಾಸು ಬರಬಹುದೆಂಬ ಆಸೆ.

ಕಬ್ಬಿನ ಬೆಳೆ ಎಂದರೆ ಸುಮ್ಮನೆ? ಬೀಜ ಬೇಕು, ಜನ ಬೇಕು. ಕೈಯಲ್ಲಿ ಕಾಸಿಲ್ಲದಿದ್ದರೂ ರೈತರು ಮಾಡುವ ಕೆಲಸ ಬಿಡುವುದಿಲ್ಲ. ಎಲ್ಲಿಯಾದರೂ ಸಾಲ ಎತ್ತಿ ನಿರ್ವಹಿಸುತ್ತಾರೆ. ಇವರಿಗೆ ಸಾಲ ಕೊಡಲು ಸಾಹುಕಾರರೂ ಮುಂದೆ ಬರುತ್ತಾರೆ. ಇವರಿಗೆ ಕೊಟ್ಟ ಸಾಲ ಮುಳುಗಿ ಹೋಗುವುದಿಲ್ಲ, ಒಂದಕ್ಕೆ ಎರಡಾಗಿ, ಎರಡಕ್ಕೆ ನಾಲ್ಕಾಗಿ ಹಿಂದಕ್ಕೆ ಬರುವುದು.

ಸಿದ್ದಪ್ಪ ಸಾಲಕ್ಕೆ ಕಬ್ಬಿನ ಬೀಜ ತಂದು ನೆಟ್ಟ. ನೆಟ್ಟ ಎಂದರೆ ಹೇಗೆ? ಅದೇ ಅವನ ತಂದೆ, ಮುತ್ತಾತ ನೆಡುತಿದ್ದ ರೀತಿಯಲ್ಲಿ. ಅವನ ತಂದೆ, ಮುತ್ತಾತನ ಕಾಲದಲ್ಲಿ ಆ ಊರಿಗೆ ದಾರಿ ಇರಲಿಲ್ಲ. ಇವನ ಕಾಲದಲ್ಲಿ ಎರಡು ಫರ್ಲಾಂಗ್ ದೂರದಲ್ಲಿ ಸರಕಾರಿ ರಸ್ತೆ ಬಂದಿದೆ. ಇವನ ಪೂರ್ವೀಕರು ಕುದರೆ ಗಾಡಿಯನ್ನೂ ಕಂಡರಿಯರು; ಸಿದ್ದಪ್ಪನ ನೆತ್ತಿಯ ಮೇಲೆ ವಿಮಾನ ಹಾರಾಡುತಿರುತ್ತವೆ. ಕಣ್ಣು ಮುಚ್ಚಿ ಬಿಡುವುದರಲ್ಲಿ ಅವು ಆ ಹಳ್ಳಿಯನ್ನೇ ದಾಟಿರುತ್ತವೆ. ಆದರೆ ಸಿದ್ದಪ್ಪ ಬೆಳಗಿನಿಂದ ಮಧ್ಯಾಹ್ನ ಮುಗಚುವ ವರೆಗೆ ಹೂಡಿದರೂ ಕಾಲು ಎಕರೆ ಹೊಲ ಒಂದು ಸಾಲಾಗುವುದಿಲ್ಲ.

ಗಂಟೆಗೆ ಅರವತ್ತು ಮೈಲಿ ಓಡುವ ರೈಲುಗಳ ಕಥೆ ಕೇಳಿದ್ದ. ಹೊಸ ಹೊಸ ಕಂದಾಯ ಕೌಳಿಗೆಗಳನ್ನು ಕೊಟ್ಟ. ಎಣ್ಣೆ, ಬತ್ತಿ ಇಲ್ಲದೆ ಉರಿಯುವ ದೀಪಗಳನ್ನು ನೋಡಿದ. ಆದರೂ ಪೂರ್ವೀಕರಂತೆ ಮರದ ನೇಗಿಲನ್ನು ಹಿಡಿದು ಗದ್ದೆ ಹೂಡಿದ.

## ಎರಡು

ನಾಲ್ಕು ಕಾಸು ಸಂಪಾದನೆಯಾಗಲಿ ಎಂಬ ಹಿರಿಯಾಸೆಯಿಂದ ಹೆಂಡತಿ, ಮಗನನ್ನು ಕಟ್ಟಿಕೊಂಡು ಸಿದ್ದಪ್ಪ ಕಬ್ಬಿನ ತೋಟದಲ್ಲಿ ದುಡಿದ. ದಿನ ಬೆಳಗಾದರೆ ನೀರು ಹಾಯಿಸುವುದು, ಏರಿಮಾಡುವುದು, ಬುಡ ಬಿಡಿಸುವುದು, ಗರಿಕಟ್ಟುವುದು ಇದರಲ್ಲಿ ಸಿದ್ದಪ್ಪನ ಪರಿವಾರ ತೊಡಗಿತು. ಅವನ ಪರಿಶ್ರಮಕ್ಕೆ ಕಬ್ಬು ಚೆನ್ನಾಗಿ ಬೆಳೆಯಿತು. ಅದನ್ನು ನೋಡಿ ಹಿಗ್ಗಿದ. ಈ ಸಾರಿ ಸಾಲವೆಲ್ಲ ತೀರಿಹೋಗುವುದೆಂದು ಸಂತೋಷ ಪಟ್ಟ.

ಮಾಗಿಯ ಚಳಿ. ಸಿದ್ದಪ್ಪನ ಮನೆಯವರಿಗೆ ಹೊದೆಯಲು ಹಚ್ಚಡವಿಲ್ಲ. ಉಡಲು ಬಟ್ಟೆಯಿಲ್ಲ; ಚಳಿ ಮೈಯನ್ನು ಕೊರಿಯುತ್ತದೆ. ಮಗ, ಹೆಂಡತಿ ಕಷ್ಟಪಡುತಿದಾರೆ. ಸದ್ಯ ಕಬ್ಬನ್ನು ಕಡಿದು ಆಲೆಯಾಡಬೇಕು. ಆಗ ಹೇಗೂ ಕೈಗೆ ನಾಲ್ಕು ಕಾಸು ಬರುತ್ತದೆ. ಕಷ್ಟಕ್ಕಿಲ್ಲದ ದುಡ್ಡು ಇನ್ನೇತಕ್ಕೆ? ಮನೆಯರೆಲ್ಲ ಚಳಿಯಲ್ಲಿ ಒದ್ದಾಡುತ್ತಿರುವಾಗ ಸಾಲವಾದರೂ ಮಾಡಿ ಬಟ್ಟೆ ತರಬೇಕೆಂದು ಸಿದ್ದಪ್ಪ ಯೋಚಿಸಿದ.

ಸಿದ್ದಪ್ಪನ ಕಬ್ಬನ್ನು ನೋಡಿ ಆ ಊರಿನವರೂ ಈ ಸಾರಿ ಪರವಾಗಿಲ್ಲ ಹಾಗೂ ಹೀಗೂ ಸಿದ್ದಪ್ಪನ ಕೈಗೆ ನಾಲ್ಕುಕಾಸು ಬರುತ್ತವೆ ಎಂದುಕೊಂಡಿದ್ದರು. ಹಸುಕೊಳ್ಳುವವರು ಕೆಚ್ಚಲನ್ನು ನೋಡಿ ಹಣ ಸುರಿಯುತ್ತಾರೆ. ಸಿದ್ದಪ್ಪನಿಗೆ ಸಾಲ ಕೊಡಲು ಯಾರೂ ಹಿಂಜರಿಯುವುದಿಲ್ಲ. ಸಾಲಮಾಡಿ ತನ್ನ ಹೆಂಡತಿಗೊಂದು ಸೀರೆ, ತನಗೆ ಮತ್ತು ಮಗುವಿಗೆ ಒಂದೊಂದು ದಗಲೆ, ಎಲ್ಲರಿಗೂ ಒಂದೊಂದು ಹಚ್ಚಡವನ್ನು ತಂದ. ಸೀರೆ. ದಗಲೆ, ಹಚ್ಚಡಗಳನ್ನೂ ನೋಡಿ ಸಿದ್ದಪ್ಪನ ಹೆಂಡತಿ ನಂಜಮ್ಮನಿಗೆ ತುಂಬಾ ಆಶ್ಚರ್ಯ. ವರ್ಷಗಟ್ಲೆ ಕೇಳಿದರೂ ಸೀರೆ ಬರುತಿರಲಿಲ್ಲ. ಇಂದು ಹೇಳದೆ ಕೇಳದೆ ಬಂದಿವೆ. ಇದು ಸಾಮಾನ್ಯ ವಿಚಾರವೇ ? ಸೀರೆಯನ್ನು ಹಿಂದೆ ತಿರುಗಿಸಿ ನೋಡುತ್ತಾ ಹೇಳಿದಳು, ಮುಂದೆ “ಇಂದು ಯಾವ ದೇವರು ಕಣ್ಣುಬಿಟ್ಟ ?”

ಹಚ್ಚಡವನ್ನು ಒಂದರ ಮೇಲೊಂದು ಇಡುತ್ತಾ ಸಿದ್ದಪ್ಪ ಹೇಳಿದ, "ದೇವರು ಕಣ್ಣುಬಿಡಲೇಬೇಕು, ನರಮನುಷ್ಯರ ವಶವೇನು ನಡೆಯುತ್ತದೆ. ನೀವೆಲ್ಲ ಈ ವರುಷ ಹಗಲು ರಾತ್ರಿ ದುಡಿಯಲಿಲ್ಲವೇ? ಅದಕ್ಕೆ ಬಂತು."

ಈ ಮಾತನ್ನು ಸಹಿಸಲು ನಂಜಮ್ಮನಿಂದಾಗಲಿಲ್ಲ. ಸಿದ್ದಪ್ಪನ ಕೈ ಹಿಡಿದು ಇಪ್ಪತ್ತಮೂರು ಮಳೆಗಾಲ ಕಳೆಯಿತು. ಈ ಮನೆ ಮೆಟ್ಟಿಲನ್ನು ಹತ್ತಿದಮೇಲೆ ಈಕೆಯೇ ಇಪ್ಪತ್ತೆರಡು ಬೇಸಾಯವನ್ನು ಮಾಡಿದ್ದಾಳೆ. ಇದುವರೆಗೂ ಹೆಂಡತಿಯನ್ನು ಕೂರಿಸಿ ಅನ್ನಹಾಕಿದನೆ? ಹಿಂದಿನಂತೆ ಈ ವರುಷವೂ ದುಡಿದಳು. ಆದರೂ ಗಂಡನ ಬಾಯಿಂದ ಇಂಥ ಮಾತು ಬಂತಲ್ಲ ಎಂದು ನೊಂದು ಹೇಳಿದಳು, "ಇಷ್ಟು ವರ್ಷ ನನ್ನ ಕೂರಿಸಿ ಅನ್ನ ಹಾಕಿದರಂತ ಕಾಣುತ್ತದೆ; ಈ ವರ್ಷಮಾತ್ರ ನಾನು ಕೆಲಸ ಮಾಡಿದೆ!"

ಗಂಡನು ತಂದ ಸೀರೆಯನ್ನು ನೋಡಿ ಹೆಂಡತಿಗೆ ಎಷ್ಟು ಆಶ್ಚರ್ಯ ವಾಯಿತೋ ಅದಕ್ಕಿಂತ ಹೆಂಡತಿಯ ಮಾತು ಕೇಳಿ ಗಂಡನಿಗೆ ಆಶ್ಚರ್ಯ ವಾಯಿತು.

ಹಚ್ಚಡವನ್ನು ಕೈಗೆ ತೆಗೆದುಕೊಳ್ಳುತ್ತಾ ಅವರ ಮಗ ಮಂಜಪ್ಪ ಹೇಳಿದ, "ನೋಡಮ್ಮ ಈ ಹಚ್ಚಡ ಎಷ್ಟು ದಪ್ಪನಾಗಿದೆ?"

"ದಪ್ಪವಾಗಿಯಾದರೂ ಇರಲಿ, ತೆಳುವಾಗಿಯಾದರೂ ಇರಲಿ ನನಗೆ ಬಂದ ಭಾಗ್ಯವೇನು? ಇದುವರೆಗೂ ನಾನು ದುಡಿದಿರಲಿಲ್ಲ. ಈ ವರ್ಷ ದುಡಿದೆ ಎಂದು ಹೇಳಿ ಕೈಯ್ಯಲ್ಲಿದ್ದ ಸೀರೆಯನ್ನು ಕೆಳಗೆ ಹಾಕಿದಳು.

ಆಕೆಯನ್ನು ತಲೆಯಿಂದ ಕಾಲಿನವರೆಗೂ ನೋಡಿ ಸಿದ್ದಪ್ಪ ಹೇಳಿದ, "ನಿನಗೆ ಅಂದ ಮಾತಾದರೂ ಏನು? ಇದುವರೆಗೂ ನೀನು ದುಡಿಯಲಿಲ್ಲ

ವೆಂದು ಯಾರು ಹೇಳಿದರು? ಇದುವರೆಗೂ ಬೇಸಾಯಮಾಡಿ ಸಾಕಾ ಯಿತು. ಕಣದಿಂದ ಪಣತಕ್ಕೆ ಬತ್ತಬಂದು ತಿಂಗಳಾಗುವುದರೊಳಗೆ ಜೋಳಿಗೆ ಹೆಗಲಮೇಲೆ ಹಾಕಿಕೊಂಡು ಹೊರಡಬೇಕು. ಈ ವರ್ಷ ಕಬ್ಬು ಹಾಕಿದೆ ಅದು ಚೆನ್ನಾಗಿ ಬೆಳೆದಿದೆ. ನಾಲ್ಕು ಕಾಸು ಸಿಗಬಹುದು. ಅದನ್ನು ಬೆಳೆದವನು ನಾನೊಬ್ಬನೇ? ನೀನು, ಮಂಜು ಇಲ್ಲದಿದ್ದರೆ ಸಾಧ್ಯವಾಗು ತಿತ್ತೆ? ನಾನು ಹೇಳಿದ್ದು ಇಷ್ಟೆ ಮಾತು.''

## ಮೂರು

ಕಬ್ಬಿನಾಲೆ ಪ್ರಾರಂಭವಾಯಿತು. ಸಿದ್ದಪ್ಪನ ಕಬ್ಬಿನಾಲೆಯನ್ನು ಕೇಳಿ ಸಾಲಕೊಟ್ಟವರು, ಗುತ್ತಿಗೆದಾರರು ಇರುವೆಯಂತೆ ಅವನನ್ನು ಮುತ್ತಿಗೆ ಹಾಕಿದರು.

ಬೆಲ್ಲ ಮಣವೊಂದಕ್ಕೆ ಎರಡುರೂಪಾಯಿ ಲೆಖ್ಖಕ್ಕೆ ಸಿದ್ದಪ್ಪ ಹಾಕಿದ್ದ. ಕಬ್ಬನ್ನು ನೆಡುವಾಗ ಬೆಲ್ಲದ ದರವೂ ಇತ್ತು. ಸಿದ್ದಪ್ಪನ ಆಲೆ ಇನ್ನೂ ಮುಗಿದಿರಲಿಲ್ಲ. ಸಾವಿರಮೈಲಿಗಳ ದೂರದಿಂದ ಬೆಲ್ಲ, ಸಕ್ಕರೆ ಮೋಟಾರು, ರೈಲುಗಳಲ್ಲಿ ಬಂದು ಹಳ್ಳಿಪಳ್ಳಿಯ ಸಣ್ಣಪುಟ್ಟ ಅಂಗಡಿಗಳನ್ನು ತುಂಬಿ ಬಿಟ್ಟಿತು. ಅಂಗಡಿಯವರು ಆ ಬೆಲ್ಲ, ಸಕ್ಕರೆಯನ್ನು ಮಣ ಹತ್ತು ಹನ್ನೊಂದು ಆಣೆಯ ದರದಲ್ಲಿ ಮಾರಹತ್ತಿದರು. ಈಗ ಸಿದ್ದಪ್ಪ ತನ್ನ ಬೆಲ್ಲವನ್ನು ಯಾವ ದರದಲ್ಲಿ ಮಾರಬೇಕು?

ತನ್ನ, ಹೆಂಡತಿ ಮತ್ತು ಮಗನ ವರುಷದ ಪರಿಶ್ರಮ, ಉಪ್ಪು ಹುಳಿ, ಅಕ್ಕಿಯಲೆಕ್ಕ, ಬೀಜ, ಮತ್ತು ಗೊಬ್ಬರಕ್ಕೆ ತಗುಲಿದ ಹಣ ಬಿಟ್ಟು ಕೇವಲ ಕಬ್ಬು ಕಡಿಯುವುದರ ಕೂಲಿ, ಗಾಣ ಮತ್ತು ಎತ್ತಿನ ಬಾಡಿಗೆ, ಹಾಲನ್ನು ಪಾಕ ಇಳಿಸಲು ತಗಲುವ ಕಟ್ಟಿಗೆಯ ವೆಚ್ಚ ಇದೆ ಮಣವೊಂದರ ಹನ್ನೆರಡು ಆಣೆಯಾಗುತ್ತದೆ. ಸಿದ್ದಪ್ಪನಿಗೆ ತನ್ನ ನಷ್ಟಕ್ಕಿಂತ ಅಂಗಡಿಯಲ್ಲಿ

ಹತ್ತು, ಹನ್ನೊಂದು ಆಣೆ ದರದಲ್ಲಿ ಮಾರುವ ಬೆಲ್ಲದ ಕಬ್ಬನ್ನು ಬೆಳೆದವರ ಚಿಂತೆ ಹೆಚ್ಚಾಯಿತು. ನನ್ನ ಹಾಗೆ ಅವರೂ ನರ ಮನುಷ್ಯರಲ್ಲವೇ? ಆಲೆ ಮಾಡದ ಜಾಗದಲ್ಲಿಯೇ ಮಣವೊಂದಕ್ಕೆ ಒಂದೂಕಾಲು ರೂಪಾಯಿಯಂತೆ ಮಾರಿದರೂ ನನಗೆ ನಷ್ಟ. ಈಗ ಅಂಗಡಿಯಲ್ಲಿ ಸಿಗುವ ಬೆಲ್ಲ ಸಾವಿರಾರು ಮೈಲಿಗಳಿಂದ ರೈಲು ಮೋಟಾರುಗಳಲ್ಲಿ ಬಂದಿವೆ. ಬೆಳೆದವರ ಜೀವನ ವೇನು? ಬೆಲ್ಲ ಮಾಡುವದಕ್ಕೆ ತಗಲುವ ಖರ್ಚೇನು? ಇಷ್ಟು ದೂರದ ಬಾಡಿಗೆ ಏನು? ವ್ಯಾಪಾರಗಾರರು ಲಾಭವಿಲ್ಲದೆ ಮಾರುವುದಿಲ್ಲ. ಈ ಹತ್ತಾಣೆ ದರದಲ್ಲಿ ಅವರ ಲಾಭವೂ ಸೇರಿದೆ. ಇಷ್ಟು ಅಗ್ಗ ಮಾರಲು ಹೇಗೆ ಸಾಧ್ಯವಾಯಿತು?

ಸಿದ್ದಪ್ಪನಿಗೆ ಕೇವಲ ಲೆಕ್ಕ ಹಾಕಿದ್ದೆ ಬಂತು. ತನ್ನ ಬೆಲ್ಲವನ್ನೆಲ್ಲ ಮಣವೊಂದಕ್ಕೆ ಹತ್ತು ಆಣೆ ದರದಂತೆ ಮಾರಿ ಕೈ ತೊಳೆದುಕೊಂಡ. ಆ ವರ್ಷ ಗದ್ದೆ ಮತ್ತು ಹೊಲದಲ್ಲಿ ಬೆಳೆದ ಪೈರು ಕಬ್ಬಿನ ವ್ಯವಸಾಯಕ್ಕೆ ತಗಲಿದ ಖರ್ಚಿನಲ್ಲಿ ಕೊಚ್ಚಿಹೋಯಿತು. ಗುತ್ತಿಗೆ ಮತ್ತು ಬಡ್ಡಿ ಬಾಕಿ ನಿಂತಿತು.

## ನಾಲ್ಕು

ಗುತ್ತಿಗೆಯೂ ನಿಲ್ಲುವ ಹಾಗಿಲ್ಲ, ಬಡ್ಡಿಯೂ ನಿಲ್ಲುವಹಾಗಿಲ್ಲ. ಜಮೀನುದಾರರು ಗುತ್ತಿಗೆಯ ಆಕೆಗೆ ಜಮೀನು ಕೊಡುವುದು. ಗೇಣಿ ಯಿಂದ ಅವರ ಜೀವನ ನಡೆಯುವುದು. ಸಾಲ ಕೊಟ್ಟವರ ಸ್ಥಿತಿಯೂ ಹಾಗೆಯೇ! ಮೂಲ ಕೊಡುವುದು ನಾಲ್ಕು ಕಾಲ ಸಾವಕಾಶವಾದರೂ ಸಹಿಸುವರು, ಬಡ್ಡಿಯನ್ನು ಒಂದು ತಿಂಗಳು ಬಾಕಿ ಬಿಡುವುದಿಲ್ಲ.

ಸಿದ್ದಪ್ಪನ ಕಣ್ಣಿನ ಮುಂದೆ ಆವನ ಪೂರ್ವೀಕರು ಸಂಪಾದಿಸಿದ

ಜಮೀನು ಸಾಲ ಕೊಟ್ಟವರ ವಶವಾಗಿತ್ತು. ಅದಕ್ಕೆ ತಾನು ಕಾರಣವಲ್ಲ ವೆಂಬ ಸಮಾಧಾನವಿದ್ದರೂ ಪೂರ್ವೀಕರು ಗಳಿಸಿದ ಜಮೀನು ಪರಭಾರೆ ಯಾಗಿದ್ದರ ದುಃಖ ಅವನ ಮನಸ್ಸನ್ನು ಕೊರೆಯುತ್ತಿತ್ತು. ಆತನ ತಂದೆ ಮದುವೆಗಾಗಿ ಸಾಲ ಎತ್ತಿದ. ಅದು ಬಡ್ಡಿಗೆ ಬಡ್ಡಿ ಸೇರಿ ಬಲವಾಗಿ ಬೆಳೆದು ಜಮೀನನ್ನೆಲ್ಲ ವ್ಯಾಪಿಸಿತು ಸಿದ್ದಪ್ಪನಿಗೆ ಇನ್ನೂ ಚಿಕ್ಕವಯಸ್ಸು. ಆಗ ಆತನ ತಂದೆ ತೀರಿಕೊಂಡರು. ಯಾವ ದಾರಿಯೂ ಇಲ್ಲದೆ ಜಮೀನ ನ್ನೆಲ್ಲ ಸಾಲ ಕೊಟ್ಟವರ ವಶಮಾಡಬೇಕಾಯಿತು. ತನ್ನ ಪೂರ್ವೀಕರ ಸಂಪತ್ತು, ತನ್ನ ತಾಯಿ ತಂದೆ, ಅಜ್ಜ ಅಜ್ಜಿ ಉತ್ತಿ ಬಿತ್ತಿ ಪೈರನ್ನು ಕೊಯ್ದು ಸ್ಥಳವೆಂಬ ಮಮತೆಯಿಂದ ಸಿದ್ದಪ್ಪ ಅದೇ ಜಮೀನನ್ನು ಗುತ್ತಿಗೆಗೆ ಮಾಡಿಕೊಂಡಿದ್ದ.

ತನ್ನ ಮದುವೆ ಮತ್ತು ಎತ್ತಿಗೆ ತಿರುಗಿ ಸಿದ್ದಪ್ಪನಿಗೆ ಸಾಲ ಮಾಡ ಬೇಕಾಯಿತು. ಇವುಗಳಲ್ಲಿ ಯಾವುದನ್ನೂ ಬಿಡುವಹಾಗಿಲ್ಲ, ಒಂದಕ್ಕಿಂತ ಒಂದು ಮುಖ್ಯವಾದದ್ದು. ಒಂದೆರಡು ವರ್ಷ ಸರಿಯಾಗಿ ಬೆಳೆಯಾಗದೆ ಗುತ್ತಿಗೆಯೂ ಬಾಕಿ ನಿಂತಿತು. ಸಾಲ ತೀರಿಸಲು ಒದ್ದಾಡಿದ ಹಾಗೂ ಅದು ಇನ್ನೂ ಮೆತ್ತಿಕೊಳ್ಳುತ್ತಾ ಬಂತು. ಅವನ ತಂದೆಯ ಕಾಲದಲ್ಲಿ ಲೇವಾ ದೇವಿ ಬಾಯಿ ಮಾತಿನಲ್ಲೇ ನಡೆಯುತಿತ್ತು. ಬಡ್ಡಿಯ ದರವೂ ಕಡಮೆ. ಅಗ ಸ್ವಂತ ಹಿಡುವಳಿ. ಆದರೂ ಸಾಲ ತೀರಿಸಲು ಸಾಧ್ಯವಾಗಲಿಲ್ಲ. ಬರುಬರುತ್ತಾ ಬುದ್ಧಿವಂತಿಕೆ ಬೆಳೆದು ಸಮಯ ನಾಜೋಕಾಗುತ್ತಾ ಬಂತು. ಕೈ ಕಾಲುಗಳಿಂದ ಮಾಡುವ ಕೆಲಸ ನಿಲ್ಲುತ್ತಾ ಬಂತು. ಕೇವಲ ಬುದ್ಧಿ ವಂತಿಕೆಯಿಂದಲೇ ಕೆಲಸ ಕಾರ್ಯ ನಡೆಯಲು ಪ್ರಾರಂಭವಾಯಿತು. ಸಿದ್ದಪ್ಪ ಮಾತ್ರ ಅವನ ಅಜ್ಜ ಮುತ್ತಜ್ಜರಂತೆ ಕೈ ಕಾಲುಗಳನ್ನು ಆಡಿಸುತ್ತಲೇ ಬೇಸಾಯ ಮಾಡುತ್ತಿದ್ದ. ಅದೇ ಮರದ ನೇಗಿಲು, ಅದೇ ತರದ ವ್ಯವ ಸಾಯ, ಅದೇ ಜೀವನ. ಕಬ್ಬನ್ನೂ ಪೂರ್ವೀಕರ ರೀತಿಯಲ್ಲೇ ನೆಟ್ಟಿದ್ದ.

ತನ್ನ ಚಿಕ್ಕವಸ್ಸಿನಲ್ಲಿ ಬಾಯಿಯ ಲೇವಾ ದೇವಿ ನಿಂತು ಕೈಯಲ್ಲಿ ಪ್ರಾರಂಭವಾಗಿತ್ತು. ವಯಸ್ಸಾದ ಹಾಗೆಲ್ಲ ಕಾಲ ನಾಜೂಕಾಗುತ್ತ ಬಂದು ಕಾಗದ ಪತ್ರಗಳ ಮೇಲೆ ನಡೆಯುವ ಲೇವಾದೇವಿಗೆ ಹೆಬ್ಬೆಟ್ಟಿನ ಗುರ್ತು ಪ್ರಾರಂಭವಾಯಿತು, ತರುವಾಯ ಕಾಗದದ ಮೇಲಿನ ಲೇವಾದೇವಿ ಅಪ್ರ ಮಾಣಿಕವಾದುದೆಂದು ನಿರ್ಧಾರವಾಗಿ ಛಾಪಾಕಾಗದದ ಮೇಲೆ ಲೇವಾ ದೇವಿ ಆರಂಭವಾಯಿತು. ಸಿದ್ದಪ್ಪನ ಕೂದಲು ನೆರೆಯುವ ಕಾಲಕ್ಕೆ ಛಾಪಾ ಕಾಗದದ ಮೇಲಿನ ಬರವಣಿಗೆ ಊರ್ಜಿತವಾಗದೆಂದೂ ಸಬ್ ರಿಜಿಸ್ಟ್ರಾರ ರವರ ಸಮಕ್ಷಮ ರಿಜಿಸ್ಟ್ರಾದರೆ ಸಿಂಧುವಾಗುವುದೆಂಬ ಕಾನೂನು ಬಳಕೆಗೆ ಬಂತು. ಅದರಂತೆ ಸಿದ್ದಪ್ಪ ತನ್ನ ಇಳಿವಯಸ್ಸಿನಲ್ಲಿ ಪೂರ್ವೀಕರು ಸಂಪಾ ದಿಸಿದ್ದ ದನಕರು ನಗನಾಣ್ಯ, ಪಾತ್ರೆ ಪಲ್ಗಿಗಳನ್ನು ಛಾಪಾ ಕಾಗದದ ಮೇಲೆ ಸಾಲ ಕೊಟ್ಟವರಿಗೆ ಬರೆದು ಸಬ್‌ರಿಜಿಸ್ಟ್ರಾರವರ ಮುಂದೆ ರಿಜಿಸ್ಟರು ಮಾಡಿ ಕೊಟ್ಟಿದ್ದ. ಪ್ರಪಂಚದಲ್ಲಿ ಇಷ್ಟೊಂದು ಮಾರ್ಪಾಡಾದರೂ ಜನರ ವ್ಯವ ಹಾರವೆಲ್ಲ ಕಾಗದ ಪತ್ರದಲ್ಲಿ ರೂಪಗೊಂಡಿದ್ದರೂ ಸಿದ್ದಪ್ಪ ಓಬಿರಾಯನ ಕಾಲದ ರೀತಿಯಲ್ಲಿ ವ್ಯವಸಾಯ ಮಾಡುತ್ತಿದ್ದ.

ಪೂರ್ವದಲ್ಲಿ ಕಂದಾಯ ಕೌಳಿಗೆಯನ್ನು ರೈತರು ತಾವು ಬೆಳೆದ ಧಾನ್ಯ ದಲ್ಲಿ ಸರಕಾರಕ್ಕೆ ಅಳೆಯುತ್ತಿದ್ದರೆಂಬ ಕಥೆಯನ್ನು ಸಿದ್ದಪ್ಪ ತನ್ನ ಅಜ್ಜಿಯ ಬಾಯಿಂದ ಕೇಳಿದ್ದ. ಶ್ರಮ ಕಡಮೆಯಾಗುವುದಕ್ಕೂ ವ್ಯವಹಾರವು ಸುಲಭ ವಾಗುವುದಕ್ಕೂ ಸರಕಾರವು ಧವಸವನ್ನು ಬಿಟ್ಟು ಹಣದ ರೂಪದಲ್ಲಿ ಕಂದಾ ಯವನ್ನು ವಸೂಲು ಮಾಡಲು ಪ್ರಾರಂಭಿಸಿತು. ತಂದೆ ಹಣರೂಪದಲ್ಲಿ ಕಂದಾಯ ಕಟ್ಟುತಿದ್ದುದನ್ನು ಸಿದ್ದಪ್ಪ ನೋಡಿದ್ದ.

ಹಣವನ್ನು ಒಂದು ಕಡೆಯಿಂದ ಮತ್ತೊಂದು ಕಡೆಗೆ ಸಾಗಿಸುವುದು ಬಹಳ ಪ್ರಯಾಸ. ವ್ಯವಹಾರವನ್ನು ಲಘುವನ್ನಾಗಿ ಮಾಡಲು ಕಾಗದದ ಚೂರುಗಳ ನೋಟುಗಳ ಹೆಸರಿನಲ್ಲಿ ಬಂದವು. ಸಿದ್ದಪ್ಪ ತನ್ನ ಕೈಯಿಂದ ತನ್ನ ಪೂರ್ವೀಕರ ಜಮೀನಿಗೆ ಒಂದೇ ಸಾರಿ ಕಂದಾಯ ಕಟ್ಟಿದ್ದ. ಸುಮಾರು ಮೂವತ್ತು ವರ್ಷದ ಹಿಂದಿನ ಮಾತು. ಈಗಲೂ ನೆನ್ನೆಯಂತೆ ಚೆನ್ನಾಗಿ ಅಪ್ಪನಿಗೆ ನೆನಪಿದೆ. ನೋಟುಗಳನ್ನೇ ತೆಗೆದುಕೊಂಡು ಹೋಗಿ ಲೆಕ್ಕಮಾಡಿ ಕಿರ್ದಿ ಬರೆಯಿಸಿ ಬಂದಿದ್ದ. ಈ ಆಕಾಶ ಪಾತಾಳದ ವ್ಯತ್ಯಾಸವನ್ನು ಅವನ ಕಣ್ಣುಗಳೇ ಕಂಡಿದ್ದವು.

ಮೊದಲು ಅಧಿಕಾರಿಗಳು ಉದ್ದ ಕೋಟನ್ನೂ, ಪೇಟವನ್ನೂ ಧರಿಸಿ ಕೊಂಡು ಪಲ್ಲಕ್ಕಿಯಲ್ಲಿ ಕುಳಿತು ಬರುತ್ತಿದ್ದರು. ಕ್ರಮೇಣ ಕುದುರೆಯ ಮೇಲೂ ತರುವಾಯ ಮೋಟಾರಿನ ಮೇಲೂ ಪ್ರಯಾಣ ಪ್ರಾರಂಭವಾ ಯಿತು. ಅವರು ಕ್ರಾಪ್ ಬಿಟ್ಟಿರುತ್ತಿದ್ದರು ; ತಲೆಯಮೇಲೆ ಹ್ಯಾಟ್ ಇರು ತ್ತಿತ್ತು. ಕೋಟನ್ನೂ ಪಾಯಿಜಾಮುವನ್ನೂ ತೊಟ್ಟು ನೆಕ್‌ಟಾಯಿ ಕಟ್ಟಿರು ತಿದ್ದರು. ಕಾಲಲ್ಲಿ ಬೂಟ್ಸು, ಕೈಯಲ್ಲಿ ಸಿಗರೇಟ್ ಇರುತ್ತಿತ್ತು. ಈ ಆಟ ವೆಲ್ಲ ಸಿದ್ದಪ್ಪನ ಕಣ್ಣಿನ ಮುಂದೆ ನಡೆಯುತಿತ್ತು. ಪ್ರಪಂಚದಲ್ಲಿ ಇಷ್ಟು ಪರಿವರ್ತನೆಯಾಗಿದ್ದರೂ ಸಿದ್ದಪ್ಪ ಎತ್ತಿನ ಬಾಲವನ್ನೇ ಹಿಡಿದುಕೊಂಡು ಬೇಸಾಯಮಾಡಿದ ಎತ್ತು ಮುಂದೆ ಇವನು ಹಿಂದೆ.

ಮೊದಲು ವಿದ್ಯಾಭ್ಯಾಸ ಮಠದಲ್ಲಿ ನಡೆಯುತ್ತಿತ್ತು. ಹುಡುಗರು ನೆಲದ ಮೇಲೆ ಕುಳಿತು ಮರಳಿನಮೇಲೆ ಅಕ್ಷರಾಭ್ಯಾಸ ಮಾಡುತಿದ್ದರು.

ಮುಂದೆ ಕೈಯಲ್ಲಿ ಬೆತ್ತವನ್ನು ಹಿಡಿದು ಐಗಳು ಕುಳಿತಿರುತಿದ್ದರು. ಸಿದ್ದಪ್ಪನೂ ಚಿಕ್ಕ ವಯಸ್ಸಿನಲ್ಲಿ ಒಂದೋ ಎರಡೋ ದಿನ ಮಠದಲ್ಲಿ ಐಗಳ ಮುಂದೆ ಕುಳಿತು ಬಂದಿದ್ದ. ಈಗ ವಿದ್ಯಾರ್ಥಿಗಳು ಬೆಂಚಿನಮೇಲೆ ಕುಳಿತು ಮೇಜಿನಮೇಲೆ ಕಾಗದವನ್ನಿಟ್ಟುಕೊಂಡು ಫೌಂಟನ್‌ಪೆನ್ನುಗಳಿಂದ ಬರೆಯುತ್ತಾರೆ. ಪಾಠ ಹೇಳಿಕೊಡುವವರಿಗೆ ಪ್ರೊಫೆಸರ್ ಎನ್ನುತ್ತಾರೆ. ಗೌನನ್ನು ತೊಟ್ಟು ವೇದಿಕೆಯಮೇಲೆ ನಿಂತು ವ್ಯಾಖ್ಯಾನಮಾಡುತ್ತಾರೆ. ಅವರ ಕೈಯಲ್ಲಿ ಬೆತ್ತವಾಗಲಿ, ಪುಸ್ತಕವಾಗಲಿ ಇರುವುದಿಲ್ಲ. ಮೊದಲು ಹಿರಿಯರು— ನಮ್ಮ ಹುಡುಗ ರಾಮಾಯಣ ಮುಗಿಸಿರುವನು, ನಮ್ಮ ಹುಡುಗ ಅಮರಕೋಶವನ್ನು ಮುಗಿಸಿರುವನು, ನಮ್ಮ ಹುಡುಗ ಸಾಹಿತ್ಯವನ್ನು ಮುಗಿಸಿರುವನು ಎಂದು ಮುಂತಾಗಿ ಹೇಳುತಿದ್ದರು. ಈಗ ಬಾಯಿಗೆ ಪ್ರಯಾಸವಾಗದ ರೀತಿಯಲ್ಲಿ ಬಿ. ಎ. ಪಾಸುಮಾಡಿರುವನು, ನಮ್ಮ ಹುಡುಗ ಬಿ.ಎಸ್.ಸಿ ಮಾಡಿರುವನು, ನಮ್ಮ ಹುಡುಗ ಎಂ.ಎ. ಮಾಡಿರುವನು ಎಂದು ಹೇಳುತ್ತಾರೆ. ಎಷ್ಟು ವ್ಯತ್ಯಾಸ? ಕತ್ತಲೆಯಿಂದ ಬೆಳಕಿಗೆ ಬಂದಷ್ಟು. ಆದರೂ ಸಿದ್ದಪ್ಪ ತನ್ನ ಹಿರಿಯರಂತೆ ಬೆಳಗಿನಿಂದ ಬೈಗಿನವರೆಗೂ ಕಾಲು ಎಕರೆ ಜಮೀನನ್ನು ಒಂದುಸಾಲು ಉಳುತಿದ್ದ.

## ಐದು

ಸಿದ್ದಪ್ಪನ ಕಬ್ಬಿನ ವ್ಯವಸಾಯ ಮೈಮೇಲೆ ಬಂತು. ಗುತ್ತಿಗೆ ಮತ್ತು ಬಡ್ಡಿ ಬಾಕಿಯಾಯಿತು. ಕಬ್ಬಿನ ಆಲೆ ಮುಗಿಸಿದವನು ಮನೆಗೆ ಬಂದು ಹಾಸಿಗೆ ಹಿಡಿದ. ಬರಗಾಲದಲ್ಲಿ ಮಗ ಉಣ್ಣುವುದನ್ನು ಕಲಿತಹಾಗೆ ಈ ವಿಪತ್ತಿನ ಜೊತೆಯಲ್ಲಿ ಔಷಧಿಯ ಖರ್ಚೂ ಸೇರಿತು. ಮಂಜಪ್ಪ ಅನೇಕ ಪಂಡಿತರ ಹತ್ತಿರ ಓಡಿದ. ಪಂಡಿತರು ರೋಗಿಯನ್ನು ನೋಡಿ ಒಂದೊಂದು ರೀತಿಯಲ್ಲಿ ಅಭಿಪ್ರಾಯ ಪಟ್ಟು ಮದ್ದನ್ನು ಕೊಟ್ಟರು.

ಅಣ್ಣೇಗೌಡರು ಅದೇ ಊರಿನ ಅನುಭವಶಾಲಿಗಳಾದ ಪಂಡಿತರು. ಸಿದ್ದಪ್ಪನನ್ನು ಚೆನ್ನಾಗಿ ಪರೀಕ್ಷೆಮಾಡಿ, ಕೈಹಿಡಿದು ನಾಡಿಯನ್ನು ನೋಡಿ ಹೇಳಿದರು, "ಇನ್ನೂ ರೇಷ್ಮೆಕಾಯಿಲೆಯ ಸ್ಥಿತಿಯಲ್ಲಿಲ್ಲ. ಒಂದೆರಡು ದಿನ ಸುಮ್ಮನಿದ್ದರೆ ರೆಷ್ಮೆಕಾಯಿಲೆಗೆ ತಿರುಗಬಹುದು. ಕೆಮ್ಮು ಆಗಲೆ ಆರಂಭವಾಗಿದೆ. ಖಫ ಹುಟ್ಟುವ ಸಂಭವವಿದೆ. ನಾನು ಒಂದು ಕಷಾಯ ಮಾಡಿ ಕೊಡುತ್ತೇನೆ. ಅದನ್ನು ತೆಗೆದುಕೊಳ್ಳಲಿ

ಅಣ್ಣೆಗೌಡರ ಮಾತನ್ನು ಕೇಳಿ ಮಲಗಿದ್ದ ಸಿದ್ದಪ್ಪ ಮೆಲ್ಲಗೆ ಕೆಮ್ಮುತ್ತಾ ಹೇಳಿದ, "ಅಣ್ಣೇಗೌಡರೇ, ನಿಮಗೊಂದು ಹುಚ್ಚು. ನಮ್ಮ ಮಂಜನಿಗೆ ಮಾಡಲು ಬೇರೆ ಕೆಲಸವಿರಲಿಲ್ಲ. ನಿಮಗೆ ತೊಂದರೆ ಕೊಡಲು ಕರೆದು ಕೊಂಡು ಬಂದ. ಕಬ್ಬಿನ ಆಲೆಯಲ್ಲಿ ಒಂದು ವಾರ ನಿದ್ದೆಗೆಟ್ಟೆ; ಮನೆಯಲ್ಲಿಯೂ ಕೆಲಸಮಾಡಿದೆ; ಆದ್ದರಿಂದ ಮೈ ಬಿಸಿಯಾಗಿರಬಹುದು."

ಅಣ್ಣೆಗೌಡರ ಔಷಧಿಯಿಂದ ಕಾಹಿಲೆ ಗುಣಮುಖವಾಗಲಿಲ್ಲ. ಸ್ಥಿತಿ ಹಾಗೆ ಇತ್ತು. ಕೈಕಾಲು ಮತ್ತು ಸೊಂಟದಲ್ಲಿ ನೋವು ಕೆಣಕಿತು. ಅಶಾಂತಿಯಿಂದ ಒದ್ದಾಡಿಕೊಳ್ಳಲು ಆರಂಭಿಸಿದ. ತಂದೆಯ ಗೋಳನ್ನು ನೋಡ

ಲಾರದೆ ಪಕ್ಕದ ಹಳ್ಳಿಯಿಂದ ರಾಮುಭಟ್ಟರೆಂಬ ನಿಪುಣ ವೈದ್ಯರನ್ನು ಕರೆದು ಕೊಂಡು ಬಂದ. ರಾಮು ಭಟ್ಟರು ಬಾಯಿಯನ್ನು ಕಳೆಯಿಸಿ ನಾಲಗೆಯನ್ನು ಪರೀಕ್ಷೆ ಮಾಡಿದರು. ಗಂಟಲನ್ನು ನೋಡಿದರು. ಹೊಟ್ಟೆಯು ಪರೀಕ್ಷೆ ಯಾಯಿತು. ಕೆಮ್ಮುತ್ತಿರುವುದನ್ನು ನೋಡಿ ಹೇಳಿದರು, "ಕೆಮ್ಮು, ಕಫ ಇದೆ. ಆದರ ಜೊತೆಯಲ್ಲಿ ಮೈಯೆಲ್ಲ ನೋವೆಂದು ಒದ್ದಾಡಿಕೊಳ್ಳುತ್ತಿದಾರೆ. ಆದರೆ ರೇಷ್ಮೆ ಕಾಹಿಲೆಯ ಚಿಹ್ನೆ ಯಾವುದು ಕಂಡುಬರುವುದಿಲ್ಲ. ಈಗ 'ಕರಿಜ್ವರ' ಎಂಬ ಹೊಸಕಾಹಿಲೆಯೊಂದು ಊರೆಲ್ಲ ಹಬ್ಬಿದೆ. ಅದನ್ನು ತಡೆಗಟ್ಟಲು ನಾನು ವಿಶ್ವಪ್ರಯತ್ನ ಪಡುತಿದ್ದೇನೆ. ಆ ಕಾಹಿಲೆ ಇನ್ನೇನು ಅಲ್ಲ, ಸ್ವಲ್ಪ ಜ್ವರ ಕಾಣಿಸಿಕೊಳ್ಳುವುದು ; ನಾಲಿಗೆ ಕಪ್ಪಾಗುವುದು ; ಕಣ್ಣಲ್ಲಿ ಮಂಜು ಕವಿಯುವುದು. ಸರಿ, ಸಾಯಂಕಾಲದ ಹೊತ್ತಿಗೆ ಗಂಟಲು ಕಟ್ಟೀ ಬಿಡುವುದು."

ಪಂಡಿತರ ಕರಿಜ್ವರದ ವಿವರವನ್ನು ಕೇಳಿ ಸಿದ್ದಪ್ಪ ಹೇಳಿದ "ದೇವರು ನನಗೆ ಅಂಥಾ ಸುಖಸಾವು ಕೊಟ್ಟಿಲ್ಲ. ಹುಟ್ಟುತ್ತಾ ಆ ಪುಣ್ಯ ಪಡೆದು ಕೊಂಡು ಬಂದಿಲ್ಲ. ಹಾಸಿಗೆ ಹಿಡಿದು ಇಪ್ಪತ್ತು ದಿನದ ಮೇಲಾ ಯಿತು."

"ನಾನೂ ಅದೇ ಹೇಳುವುದು, ಇದು ಕರಿ ಜ್ವರವಲ್ಲ. ನಿಮಗೆ ಜ್ವರ ಬರುತ್ತಾ ಇಪ್ಪತ್ತು ದಿನದ ಮೇಲಾಯಿತೆಂದು ಹೇಳುತಿದ್ದೀರಿ. ಅದು ಕೇವಲ ಒಂದು ದಿನದ ಆಟ. ಇದು ಆ ಕಾಹಿಲೆಯಲ್ಲ. ಮುಖ್ಯ ನಿಮ ಗಿರುವುದು ನಿಶ್ಶಕ್ತಿ. ಸ್ವಲ್ಪ ಶಕ್ತಿ ಬಂದರೆ ಎಲ್ಲ ಸರಿಹೋಗುತ್ತದೆ. ನಾನು ಒಂದು ಲೇಹವನ್ನು ಕಳುಹಿಸಿ ಕೊಡುವೆನು. ಅದನ್ನು ಒಂದು ತಿಂಗಳ ಕಾಲ ಸೇವಿಸಿ. ಹಾಲು ತುಪ್ಪ ಹೆಚ್ಚಾಗಿ ಉಪಯೋಗಿಸಬೇಕು, ಎಲ್ಲಾ ವಾಸಿಯಾಗುವುದು."

ಪಂಡಿತ ರಾಮುಭಟ್ಟರು ಔಷಧಿ ಕೊಟ್ಟು ಹೋಗಿ ಐದಾರು ದಿನ

ಗಳಿಗೆ ಒಬ್ಬ ಮಲೆಯಾಳಿ ಪಂಡಿತರು ಸುತ್ತುತ್ತಾ ಆ ಮನೆಗೆ ಬಂದಳಿದರು. ಅವರ ಆಗಮನದಿಂದ ಮನೆಯುವರಿಗೆಲ್ಲ ಸಂತೋಷವಾಯಿತು. ತನ್ನ ಪರಿಚಯುವನ್ನು ಮಾಡಿಕೊಡುತ್ತಾ ಮಲೆಯಾಳ ಪಂಡಿತರು ಹೇಳಿದರು, " ಬೆಂಗಳೂರಿನಲ್ಲಿ ಸಾಹುಕಾರರೊಬ್ಬರು ಹಣಕೊಟ್ಟು ನನ್ನನ್ನು ಕರೆಯಿಸಿ ಕೊಂಡಿರುವರು. ನಾನು ಅಲ್ಲಿಗೆ ಹೋಗುತಿದ್ದೇನೆ. ಮೋಟಾರಿನಲ್ಲಿ ನೆಟ್ಟಗೆ ಹೋದರೆ ನನ್ನಿಂದ ಯಾರಿಗೆ ತಾನೆ ಪ್ರಯೋಜನ? ಅದರಿಂದ ನಡೆದು ಕೊಂಡು ಹೋಗುತಿದ್ದೇನೆ. ದಾರಿಯುಲ್ಲಿ ರೋಗಿಗಳು ಸಿಕ್ಕರೆ ಅವರನ್ನು ಮಾತನಾಡಿಸುವುದು ನನ್ನ ಪದ್ಧತಿ. ಆ ಗುಡ್ಡದ ಬದಿಯಲ್ಲಿರುವ ಮನೆಯು ಯುಜಮಾನರು ಹೇಳಿ ಇಲ್ಲಿಗೆ ಕಳುಹಿಸಿದರು. ಇಲ್ಲದಿದ್ದರೆ ನಾನು ಇಷ್ಟು ಹೊತ್ತಿಗೆ ಅರ್ಧದಾರಿ ಹೋಗಿರುತಿದ್ದೆ."

ಮಂಜಪ್ಪ ಕೈ ಕಟ್ಟಿಕೊಂಡು ಪಂಡಿತರ ಮುಂದೆ ನಿಂತಿದ್ದ. ಬಾಗಿಲ ಮೂಲೆಯಲ್ಲಿ ನಿಂತು ನಂಜಮ್ಮ ಇದನ್ನೆಲ್ಲ ಕೇಳುತಿದ್ದಳು. ಸಿದ್ದಪ್ಪ ಹಾಸಿಗೆಯ ಮೇಲೆ ಮಲಗಿದ್ದ. ಪಂಡಿತರ ಮಾತನ್ನು ಕೇಳಿ ಮಂಜಪ್ಪ ಹೇಳಿದ," ದೇವರು ಕಳುಹಿಸಿದ ಹಾಗೆ ನೀವು ದಯಮಾಡಿಸಿರುವಿರಿ. ನಮ್ಮ ತಂದೆ ಹಾಸಿಗೆ ಹಿಡಿದು ಒಂದು ತಿಂಗಳಾಯಿತು, ಜ್ವರ ಬಿಡುವುದೇ ಇಲ್ಲ; ಹೊಟ್ಟೆಯೊಳಗೆ ಆಹಾರ ಹೋಗುವುದಿಲ್ಲ, ಏನಾದರೂ ಮಾಡಿ ವಾಸಿ ಯಾಗುವಂತೆ ಮಾಡಿ.''

ಪಂಡಿತರು ರೋಗಿಯ ಹತ್ತಿರ ಹೋಗಲೂ ಇಲ್ಲ ಕಾಯಿಲೆಯನ್ನು ಪರೀಕ್ಷೆ ಮಾಡಲೂ ಇಲ್ಲ.

ತಮ್ಮ ಔಷಧಿ ಪೆಟ್ಟಿಗೆಯನ್ನು ಬಿಚ್ಚಿ ಮಂಜಪ್ಪನನ್ನು ಇನ್ನೂ ಹತ್ತಿರ ಕರೆದರು. ಅವನು ಹತ್ತಿರ ಹೋದ. ಅವನಿಗೆ ಔಷಧಿಗಳನ್ನು ತೋರಿಸಿ, ಅವುಗಳ ಮಹಿಮೆಯನ್ನು ವರ್ಣಿಸಿದರು. ನಂಜಮ್ಮ ದೂರ ನಿಂತಿರುವುದನ್ನು ನೋಡಿ ಹತ್ತಿರ ಬರುವಂತೆ ಕರೆದರು. ನಂಜಮ್ಮ

ಅಂಜುತ್ತಾ ಹತ್ತಿರಬಂದು ಮುಂಡಿಗೆಯ ಮರೆಯಲ್ಲಿ ನಿಂತಳು. ಪಂಡಿತರು ದೊಡ್ಡ ಸೀಸೆಯನ್ನು ತೆಗೆದು ಚೆನ್ನಾಗಿ ಅಲ್ಲಾಡಿಸಿ ತಾಯಿ ಮಗನ ಮುಂದೆ ಹಿಡಿದು ಹೇಳಿದರು, "ನೋಡಿ! ಇದು ಎಲ್ಲಾ ವ್ಯಾಧಿಗಳಿಗೂ ರಾಮಬಾಣ; ಸಿದ್ಧೌಷಧಿ. ಇದನ್ನು ನಾನು ಹಿಮಾಲಯಕ್ಕೆ ಹೋಗಿ ಅಲ್ಲಿ ತಯಾರು ಮಾಡಿರುವೆನು. ಇದನ್ನು ತಯಾರು ಮಾಡಲು ಹದಿನೈದು ವರ್ಷ ಹಿಡಿಯಿತು. ಸಹಸ್ರಾರು ರೂಪಾಯಿ ಖರ್ಚಾಯಿತು. ಈ ಔಷಧಿಯನ್ನು ತಯಾರು ಮಾಡುವಾಗ ಅನ್ನಾದಿಗಳನ್ನು ತಿನ್ನಬಾರದು. ನಾನು ಗೆಡ್ಡೆ ಗೆಣಸುಗಳನ್ನು ತಿಂದು ಇದನ್ನು ತಯಾರು ಮಾಡಿರುವೆನು.

"ಹಸಿವಿಲ್ಲದವರಿಗೆ ಹಸಿವು ಹುಟ್ಟಿಸುವುದು, ಭೇದಿಯಾಗುತಿದ್ದರೆ ನಿಲ್ಲಿಸುವುದು, ಜ್ವರ ಬರುತಿದ್ದರೆ ಓಡಿಸುವುದು. ನೋವುಗಳಿಗೆ ಇದನ್ನು ಬಿಟ್ಟರಿಲ್ಲ. ಗೂರಲು, ಖಫ, ಕೆಮ್ಮು, ವಾತ, ಪಿತ್ತ, ತಲೆನೋವು ಇತ್ಯಾದಿ ಗಳಿಗೆ ಇದರ ವಾಸನೆ ಸಾಕು. ಒಂದು ಬಾಟ್ಲಿಯನ್ನು ಉಪಯೋಗಿಸಿ, ಅದರ ಮಹತ್ವ ನಿಮಗೆ ಗೊತ್ತಾಗುವುದು. ಆದರ ಮೇಲೆಯೇ ವಿಳಾಸ ಎದೆ. ತರುವಾಯ ಎಷ್ಟು ಬೇಕಾದರೂ ವಿ.ಪಿ. ಮೂಲಕ ತರಿಸಿಕೊಳ್ಳ ಬಹುದು."

ತಾಯಿಯನ್ನು ಮಗ ನೋಡಿದ, ತಾಯಿ ಮಗನನ್ನು ನೋಡಿದಳು. ಮಂಜಪ್ಪ ಹೆದರುತ್ತ ಅದರ ಬೆಲೆ ವಿಚಾರಿಸಿದ. ಮಂಜಪ್ಪನ ಮಾತನ್ನು ಕೇಳಿ ಮಲೆಯಾಳಿ ಪಂಡಿತರು ನಕ್ಕು ಸುತ್ತಲೂ ನೋಡಿದರು. ತಾಯಿ ಮಗ ವಿನಾ ಯಾರೂ ಇರಲಿಲ್ಲ. ಸಿದ್ದಪ್ಪ ದೂರ ಮಲಗಿದ್ದ. ಪಂಡಿತರು ಹೇಳಿದರು," ನೀವು ಇದರ ಬೆಲೆ ಕೇಳುತೀರಿ! ನಾನು ಏನು ಹೇಳಲಿ? ಲಕ್ಷ ರೂಪಾಯಿ ಎಂದರೂ ಕಡಮೆ. ಕೇವಲ ಜನರ ಹಿತಾರ್ಥವಾಗಿಯೂ ಲೋಕಕಲ್ಯಾಣಕ್ಕಾಗಿಯೂ ಇದನ್ನು ಜನಗಿಗೆ ಹಂಚುತಿದ್ದೇನೆ. ನಾನು ನಿಮ್ಮಿಂದ ತೆಗೆದುಕೊಳ್ಳುತಿರುವುದು ಔಷಧಿಯ ಬೆಲೆಯಲ್ಲ, ಸೀಸದ ಬೆಲೆ

ಎಂದು ನೆನಸಿ. ಯಜಮಾನರಿಗೆ ಕಾಹಿಲೆ ವಾಸಿಯಾಗುವುದು ಮುಖ್ಯ, ಕೊಡುವವನು ದೇವರು; ನಿಮಗಾಗಿ ಹತ್ತು ರೂಪಾಯಿಗೆ ಇದನ್ನು ಕೊಡುತ್ತೇನೆ, ತೆಗೆದುಕೊಳ್ಳಿ."

ಪಂಡಿತರ ಕೈಯಿಂದ ಸೀಸವನ್ನು ತೆಗೆದುಕೊಳ್ಳದೆ ತಾಯಿ, ಮಗ ಇಬ್ಬರೂ ಮನೆಯೊಳಗೆ ಹೋದರು. ಇಬ್ಬರೂ ಮಾತು ಕಥೆಗೆ ಆರಂಭಿಸಿದರು. ಹತ್ತು ರೂಪಾಯಿಯ ಮಾತು ಹಾಗಿರಲಿ, ಇಡೀ ಮನೆಯಲ್ಲಿ ಹತ್ತು ಕಾಸಿರಲಿಲ್ಲ. ಇನ್ನು ಹತ್ತು ರೂಪಾಯಿ ಎಲ್ಲಿಂದ ತರುವುದು? ಬಹಳ ಹೊತ್ತು ಇಬ್ಬರು ತುಂಬಾ ಯೋಚಿಸಿದರು. ಯಾವ ಪ್ರಯೋಜನಕ್ಕೂ ಬರಲಿಲ್ಲ. ಕೊಟ್ಟಿಗೆಯಲ್ಲಿರುವ ಯಾವದಾದರೊಂದು ಜಾನುವಾರನ್ನು ಮಾರುವವರೆಗೆ ಅವರ ಮಾತು ಬೆಳೆಯಿತು. ಅತ್ಯಂತ ಪ್ರೇಮದಿಂದ ಸಾಕಿ ಸಲಹಿದ ಜಾನುವಾರುಗಳನ್ನು ಔಷಧಿಯ ನಿಮಿತ್ತ ಮಾರಲು ಇಬ್ಬರಿಗೂ ಮನಸ್ಸು ಬರಲಿಲ್ಲ. ಅವುಗಳನ್ನು ಮಾರುವ ಮಾತು ಬಂದರೆ ಮಕ್ಕಳನ್ನು ಮಾರುವ ಯೋಚನೆ ಬರುತಿತ್ತು. ಕೊನೆಗೂ ಮನಸ್ಸನ್ನು ಬಿಗಿಹಿಡಿದು ಸಿದ್ದಪ್ಪನ ಅನುಮತಿಗೆ ಅವನ ಹತ್ತಿರ ಹೋದರು. ಕೇಳಲು ಇಬ್ಬರಿಗೂ ಧೈರ್ಯಸಾಲದು, ಬಾಯಿ ಬಿಚ್ಚಲು ಬರುತಿರಲಿಲ್ಲ; ಹಾಗೂ ಹೀಗೂ ತಡವರಿಸುತ್ತಾ ಕೊನೆಗೆ ನಂಜಮ್ಮ ಕೇಳಿದಳು. ಹೆಂಡತಿಯ ಮಾತನ್ನು ಕೇಳಿ ಸಿದ್ದಪ್ಪ ನೀಳವಾದ ನಿಟ್ಟುಸಿರನ್ನು ಬಿಟ್ಟು ತಲೆಯನ್ನು ಸ್ವಲ್ಪ ತಿರುಗಿಸಿ ಆಕೆಯನ್ನು ನೋಡುತ್ತಾ ಹೇಳಿದ, "ನಿನ್ನ ಹೊಟ್ಟೆಯಲ್ಲಿ ಅವು ಹುಟ್ಟಲಿಲ್ಲ, ಆದ್ದರಿಂದ ಅವುಗಳನ್ನು ಮಾರಲು ನೀನು ಹೊರಟಿರುವೆ. ಕೊನೆಗೂ ನೀನು ಅವುಗಳಿಗೆ ಮಲತಾಯಿಯಾಗಿ ಉಳಿದೆ.

ನನಗೆ ಮಂಜ, ಅದನ ಕರು ಎಲ್ಲಾ ಒಂದೇ. ಮಂಜನನ್ನು ಸಾಕಿದವನೂ ನಾನು; ಅವುಗಳನ್ನು ಸಾಕಿದವನೂ ನಾನು. ನನ್ನ ಶರೀರದಲ್ಲಿ ಪ್ರಾಣವಿರುವವರೆಗೆ ತಿರುಗಿ ಆ ಮಾತನ್ನು ನನ್ನ ಮುಂದೆ ಎತ್ತಬೇಡ"

ನಂಜಮ್ಮ ಭೂಮಿಯಲ್ಲಿ ಹುದುಗಿ ಹೋದಳು.

ಜೋಲು ಮುಖಹಾಕಿಕೊಂಡು ಇಬ್ಬರೂ ಹಿಂದಿರುಗಿದರು. ಏನು ಮಾಡಲು ತೋರಲಿಲ್ಲ. ಪಂಡಿತರು ಔಷಧಿಯ ಸೀಸೆಯನ್ನು ಹಿಡಿದುಕೊಂಡು ಕುಳಿತಿದ್ದರು.

ಅನಾಯಾಸವಾಗಿ ನಂಜಮ್ಮನ ಕೈ ಕರಿಮಣಿ ತಾಲಿಯ ಕಡೆ ಹೋಯಿತು. ಇದನ್ನು ಕಟ್ಟಿರುವವನು ಸಿದ್ದಪ್ಪ. ಇದರ ಬೆಲೆ ಮತ್ತು ಮಹತ್ವ ಅದನ್ನು ಕಟ್ಟಿದವನು ಜೀವಿಸಿರುವವರೆಗೆ. ಅವನ ಪ್ರಾಣಕ್ಕಿಂತಲೂ ಕರಿಮಣಿಯ ತಾಲಿ ಹೆಚ್ಚಲ್ಲ. ಮಂಗಳ ಸೂತ್ರದಲ್ಲಿ ತಾಲಿ ಮುಖ್ಯ, ಗುಂಡುಗಳಲ್ಲ. ಆ ಸರದಲ್ಲಿರುವ ಚಿನ್ನದ ಗುಂಡುಗಳನ್ನೆಲ್ಲ ನಂಜಮ್ಮ ಬಿಚ್ಚಿ ಮಗನ ಕೈಗೆ ಕೊಟ್ಟಳು. ಮಂಜಪ್ಪ ಅವುಗಳನ್ನು ಮಾರಿ ಹಣ ತಂದ. ಇಬ್ಬರೂ ಸೇರಿ ರಾಮಬಾಣದಂಥ ಔಷಧಿಯನ್ನು ಕೊಂಡುಕೊಂಡರು.

ರಾಮಬಾಣದ ಪ್ರಯೋಗವಾದರೂ ರಾವಣನ ತಲೆ ಕತ್ತರಿಸಲಿಲ್ಲ. ಸಿದ್ದಪ್ಪನಿಗೆ ಹಾಸಿಗೆ ಹಾಸಿ ಮೂರು ತಿಂಗಳಿಗೆ ಬಂತು. ಗುಲಗುಂಜಿಯಷ್ಟು

ಗುಣ ಮುಖ ಕಾಣಲಿಲ್ಲ. ಕರಿಯ ಮಣಿ ಗುಂಡು ಮಾರಿದ ಹಣ ಇನ್ನೂ ಸ್ವಲ್ಪವಿತ್ತು. ಡಾಕ್ಟರನ್ನು ಕರೆಯಿಸುವ ಯೋಚನೆ ಹುಟ್ಟಿತು. ಆ ಊರಿನ ಶಾಂತಿರಕ್ಷಣೆಗೆ ಪೋಲೀಸ್ ಸ್ಟೇಷನ್ನು ಬಂದಿತ್ತು, ಸ್ಕೂಲಾಗಲಿ, ಆಸ್ಪತ್ರೆಯಾಗಲಿ ಬಂದಿರಲಿಲ್ಲ. ಪೇಟೆಗೆ ಹೋಗಿ ಮಂಜಪ್ಪ ಡಾಕ್ಟರನ್ನು ಕರೆದುಕೊಂಡು ಬಂದ. ಡಾಕ್ಟರು ಸಿದ್ದಪ್ಪನನ್ನು ಚೆನ್ನಾಗಿ ಪರೀಕ್ಷೆಮಾಡಿ ಇನ್‍ಜಕ್ಷನ್ ಕೊಟ್ಟು ಹೋದರು.

ಸಿದ್ದಪ್ಪನಿಗೆ ಬಂದ ರೋಗವೊಂದು. ಪಂಡಿತರು, ಡಾಕ್ಟರು ಕೊಟ್ಟ ಔಷಧಿ ಮತ್ತೊಂದು. ಈ ಅನುಪಾನದ ಗಲಾಟೆಯಲ್ಲಿ ಕರಡೊಳ್ಳಿಯುವರ ಕೈ, ಮೈಯಲ್ಲಿದ್ದ ಆಭರಣ, ಹಣ ಕಾಸೆಲ್ಲ ಹೊರಟುಹೋಯಿತು.

## ಆರು

ಆಕಾಶದಲ್ಲಿ ಗುಡುಗು ಮಿಂಚಿನ ಅಬ್ಬರ, ರೈತರ ಮನೆಯಲ್ಲಿ ಕೋಲಾಹಲ. ಗಂಡಸರು ಭೂಮಿಯನ್ನು ಹದಗೊಳಿಸುತಿರುವರು. ಹೆಂಗಸರು ಮಕ್ಕಳು ಗೊಬ್ಬರ ಗೋಡನ್ನು ಹರವು ತಿರುವರು. ಜಡವಸ್ತುವಿಗೆ ಚೇತನ ಬಂದಹಾಗೆ ಹಳ್ಳಿಯೇ ವ್ಯವಸಾಯದಲ್ಲಿ ಲೀನವಾಗಿದೆ. ಕರಡೊಳ್ಳಿ ಮನೆಯುವರು ಮಾತ್ರ ಗದ್ದೆಯಲ್ಲಿ ಕಾಣಿಸುತ್ತಿಲ್ಲ. ಅವರ ಭಾಗದ ಗದ್ದೆ ಸೋಮಾರಿಯಂತೆ ಮಲಗಿದೆ. ಹೊಸ ಬಟ್ಟೆಯ ಮೇಲಿನ ತ್ಯಾಪೆಯಂತೆ ಅದು ದೂರಕ್ಕೆ ಎದ್ದು ಕಾಣುತ್ತಿದೆ.

ಸಿದ್ದಪ್ಪನ ಸ್ಥಿತಿ ಬರಬರುತ್ತಾ ಶೋಚನೀಯವಾಗುತ್ತಿತ್ತು. ನಂಜಮ್ಮ ಮತ್ತು ಮಂಜಪ್ಪ ಅವನ ಹಾಸಿಗೆಯನ್ನು ಬಿಟ್ಟು ಕದಲುತಿರಲಿಲ್ಲ. ಮುಂಗಾರು ಮಳೆಯನ್ನು ನೋಡಿ ಮಂಜಪ್ಪನಿಗೆ ಸಿದ್ದಪ್ಪ ಹೇಳಿದ, "ನನ್ನ ಹಾಸಿಗೆಯ ಹತ್ತಿರ ಕುಳಿತಿದ್ದರೆ ಮುಂದೇನು ಗತಿ? ಊರೆಲ್ಲ ಬೀಜ ಬಿತ್ತುತಿದೆ, ನಾವು ಸುಮ್ಮನಿದ್ದರೆ ಜೀವನ ನಡೆಯಬೇಕಲ್ಲ! ಇಷ್ಟು ದುಡಿದೆ ಈಗತಿ, ಸುಮ್ಮನೆ ಕುಳಿತಿದ್ದರೆ ಭಿಕ್ಷೆಯೂ ಹುಟ್ಟುವುದಿಲ್ಲ.''

ಮಂಡಿಯ ಮೇಲೆ ಕೆನ್ನೆಯನ್ನಿಟ್ಟು ಕುಳಿತಿದ್ದ ನಂಜಮ್ಮ ಹೇಳಿದಳು "ಇಷ್ಟುವರ್ಷ ಕಾಲಿಗೆ ಗೆಜ್ಜೆ ಕಟ್ಟಿ ಕುಣಿದಾಯಿತು. ಈ ವರ್ಷ ಕುಳಿತು ನೋಡುವುದು. ದಿನ ಕಳೆಯುವುದೋ ಇಲ್ಲವೋ! ಇಷ್ಟು ದುಡಿದಿದ್ದೆ ಬಂತು; ಕೈಗೆ ಮಾತ್ರ ಏನೂ ಬರಲಿಲ್ಲ. ತಲೆ ಮೇಲೆ ಸಾಲದ ಬುತ್ತಿ ಕೂತಿದೆ. ಅದು ಹೇಗೆ ಕರಗುವುದೋ ದೇವರೆ ಬಲ್ಲ."

ಎದುರಿಗೆ ಮುಂಜಪ್ಪ ಕುಳಿತಿದ್ದ. ಕ್ಷಣಗಾಲ ಸಿದ್ದಪ್ಪ ಅವನನ್ನು ದಿಟ್ಟಿಸಿ ನೋಡಿದ. ಬಲಿಷ್ಠವಾದ ಶರೀರ; ದುಂಡು ಮುಖ; ನೀಳವಾದ ಕೈಗಳು ; ಏರುತ್ತಿರುವ ಪ್ರಾಯ. ವಯಸ್ಸು ಇಪ್ಪತ್ತಾದರೂ, ಎಪ್ಪತ್ತು ವಯಸ್ಸಿನ ಚಿಂತೆ. ಇದ್ದಕ್ಕಿದ್ದ ಹಾಗೆ ಸಿದ್ದಪ್ಪನ ಕಣ್ಣಿನ ಕೋಡಿ ಒಡೆಯಿತು. ಅದನ್ನು ತಡೆಯಲು ಬಹಳ ಪ್ರಯತ್ನ ಪಟ್ಟ. ಕೋಡಿ ಒಡೆದಮೇಲೆ ಕೆರೆ ಬತ್ತದೆ ನೀರು ನಿಲ್ಲುವುದೆ ? ಅವನ ಪ್ರಯಾಸವು ದುಃಖವನ್ನು ದ್ವಿಗುಣಮಾಡಿತು. ಮುಖ ಬಿಳುಪೇರಿತು ; ಕಣ್ಣು ಕೆಂಪಗಾದವು. ಅಳುವಿನ ಧ್ವನಿಯಲ್ಲಿ ಹೇಳಿದ, "ನಮ್ಮ ಆಟವೆಲ್ಲ ಮುಗಿದಂತೆಯೇ. ಹಾಸಿಗೆ ಹಿಡಿದು ಮೂರು ತಿಂಗಳ ಮೇಲಾಯಿತು. ಒಂದು ದಿವಸ ಸೂಡನ್ನೇರಿದರೆ ನಮ್ಮ ಕೆಲಸ ಮುಗಿದ ಹಾಗೆಯೇ. ನನಗಿರುವ ಯೋಚನೆ ನಮ್ಮ ಮಂಜನದು. ನನಗೆ ತಂದೆ ತೀರಿಹೋಗುವಾಗ ಸಣ್ಣ ವಯಸ್ಸು. ಅವನು ಹೀಗೆ ನನ್ನ ಕೈಬಿಟ್ಟಿದ್ದ. ಸಾಲ ಮಾಡಿದ್ದರೂ ತೀರಿಸಲು ಜಮೀನಿತ್ತು. ಜಮೀನೆಲ್ಲ ಸಾಲಕ್ಕೆ ಮಾರಹಾಕಿ ಗೇಣಿಗೆ ಗದ್ದೆಮಾಡಿ ಇದುವರೆಗೂ ಕಾಲ ತಳ್ಳಿದೆ. ನಾನು ಮಗನಿಗೆ ಬರಿ ಸಾಲ ಬಿಟ್ಟು ಸಾಯುತಿದ್ದೇನೆ. ಅವನು ಹೇಗೆ ಸಾಲ ತೀರಿಸುವನೊ ಸಂಸಾರ ಮಾಡಿಕೊಂಡು ಮರ್ಯಾದೆಯಿಂದ ಹೇಗೆ ಬಾಳುವನೊ ದೇವರೇ ಬಲ್ಲ. ಇನ್ನು ಮದುವೆ ಇಲ್ಲ ಮುಂಜಿ ಇಲ್ಲ, ಇವನ ವಯಸ್ಸಿನಲ್ಲಿ ನನಗೆ ಮದುವೆಯಾಗಿತ್ತು."

ಮದುವೆಯ ಮಾತು ಕೇಳಿ ಮುಂಜಪ್ಪನ ದುಂಡು ಮುಖ ಕೆಂಪಡರಿತು, ಕತ್ತು ಬಗ್ಗಿತು. ಅಲ್ಲಿಂದ ಹೊರಡಲು ಎದ್ದ. ಮಗನನ್ನು ಹತ್ತಿರ ತಂದೆ ಕರೆದ. ಅವನು ಹತ್ತಿರ ಬಂದ. ಸಿದ್ದಪ್ಪ ಎದ್ದು ಕೂರಲು ಪ್ರಯತ್ನ

ಪಡುತ್ತಾ ಮಗ್ಗುಲಿಗೆ ತಿರುಗಿ ಕೈಯೂರಿ ಆದರ ಬಲದ ಮೇಲೆ ತಲೆ ಎತ್ತಿದ. ಆಗ ಮಂಜಪ್ಪ ಬಗಲಿಗೆ ಕೈಹಾಕಿ ಎತ್ತಿದ. ನಂಜಮ್ಮ ದಿಂಬನ್ನು ಸರಿಯಾಗಿ ಅವನ ಬೆನ್ನಿನ ಹತ್ತಿರ ಇಟ್ಟಳು. ದಿಂಬಿಗೆ ಒರಗಿಕೊಳುತ್ತಾ ಸಿದ್ದಪ್ಪ ಹೇಳಿದ, "ದೇವರು ಮಾಡಿಗಿದಂತೆ ಆಗಲಿ, ನಮ್ಮಿಂದ ಸಾಧ್ಯವಾಗುವುದನ್ನು ಮಾಡದೆ ಸುಮ್ಮನಿರುವುದು ಬೇಡ. ಬೀಜ ಬಿತ್ತಲಿಕ್ಕೆ ಬೆಳಗ್ಗೆ ಅಗೋಡಿಗೆ "ಆರು" ಕಟ್ಟು. ಮಧ್ಯಾಹ್ನದ ಮೇಲೆ ಇಬ್ಬರೂ ಸೇರಿ ಹೇಗಾದರೂ ಅಗೋಡಿಗೆ ಗೊಬ್ಬರ ಹಾಕಿ. ನಾನಂತು ಹೀಗಾಗಿ ಕುಳಿತೆ; ಇನ್ನು ಏನಿದ್ದರೂ ನಿಮ್ಮ ತಲೆಯ ಮೇಲೆ ನಿಮ್ಮ ಕೈ."

ಗದ್ದೆ ಕಡೆ ಮಂಜಪ್ಪ ಹೊರಟ. ನಂಜಮ್ಮ ಒಲೆಹತ್ತಿಸಲು ಒಳಗೆ ಹೋದಳು. ಅಡುಗೆಯನ್ನು ಮುಗಿಸಿ ಗಂಡನಿಗೆ ಗಂಜಿಯನ್ನು ತೆಗೆದುಕೊಂಡು ನಂಜಮ್ಮ ಬಂದಳು. ಸಿದ್ದಪ್ಪನಿಗೆ ಮೈಮೇಲೆ ಎಚ್ಚರವಿಲ್ಲ, ಜ್ವರ ಉಕ್ಕುತ್ತಿತ್ತು. ಮುಚ್ಚಂಜೆ ಹೊತ್ತಿಗೆ ಮಂಜಪ್ಪನೂ ಬಂದ. ತಾಯಿ ಮಗ ಇಬ್ಬರೂ ಅವನ ಹಾಸಿಗೆಯ ಹತ್ತಿರ ಕುಳಿತು ಬೆಳಗು ಮಾಡಿದರು. ಕೋಳಿ ಕೂಗುವ ಹೊತ್ತಿನಲ್ಲಿ ಸ್ವಲ್ಪ ಜ್ವರ ಹಿರಿಯಿತು. ಇಬ್ಬರಿಗೂ ಪ್ರಾಣ ಬಂತು. ಮುಖ ತೊಳೆದು ಗಂಡನಿಗೆ ಗಂಜಿ ಕಾಯಿಸಲು ನಂಜಮ್ಮ ಒಳಗೆ ಹೋದಳು. ಹೂಡುವ ಎತ್ತುಗಳಿಗೆ ಹುಲ್ಲು ಹಾಕಲು ಒಳಗೆ ಹೆಬ್ಬಾಗಿಲನ್ನು ತೆಗೆದು ಹೊರಗೆ ಮಂಜಪ್ಪ ಹೋದ. ಹೆಬ್ಬಾಗಿಲ ಮುಂದೆಯೇ ಕೆಲವರು ನಿಂತಿರುವುದನ್ನು ಅಕಸ್ಮಾತ್ತಾಗಿ ನೋಡಿ ಮಂಜಪ್ಪ ಹೆದರಿದ.

ಅವರಲ್ಲಿ ಒಬ್ಬರು ಹ್ಯಾಟು, ಕೋಟು, ಬೂಟ್ಸು ತೊಟ್ಟಿದ್ದರು. ಜೊತೆಯಲ್ಲಿ ಇಬ್ಬರು ಪೋಲಿಸಿನವರಿದ್ದರು. ಇವರ ಹಿಂದೆ ಜಮೀನು ಗುತ್ತಿಗೆ ಕೊಟ್ಟವರೂ ಹಣ ಬಡ್ಡಿಗೆ ಕೊಟ್ಟವರೂ ನಿಂತಿದ್ದರು. ಸ್ವಲ್ಪ ದೂರದಲ್ಲಿ ಕೆಲವು ಮಂದಿ ಆಳುಗಳಿದ್ದರು. ಇವರನ್ನೆಲ್ಲ ನೋಡಿ ಅತ್ಯಂತ ವಿನಯದಿಂದ ಅವರೆಲ್ಲರಿಗೂ ಕೈ ಮುಗಿದು ಮನೆಯೊಳಗೆ ಬರುವಂತೆ ಅರಿಕೆ ಮಾಡಿಕೊಂಡ. ಯಾರೂ ಅಲ್ಲಿಂದ ಕದಲಲಿಲ್ಲ. ಒಬ್ಬರನ್ನೊಬ್ಬರು ನೋಡಿದರು. ಹ್ಯಾಟು, ಬೂಟನ್ನು ತೊಟ್ಟಿದ್ದ ವ್ಯಕ್ತಿ ಪೋಲಿಸಿನವರ ಕಡೆ ತಿರುಗಿಹೇಳಿತು. " ಆಳುಗಳನ್ನು ಜೊತೆಯಲ್ಲಿ ಕರೆದುಕೊಂಡು ಮನೆಯ ಸುತ್ತ ಕಾಯುತಿರಿ. ಮನೆಯ ಹೊರಗೆ ಸಾಮಾನು ಹೋಗದಂತೆ ನೋಡಿಕೊಳ್ಳಿ."

ಬಡ್ಡಿಗೆ ಸಾಲ ಕೊಟ್ಟ ವ್ಯಕ್ತಿ ಮಧ್ಯೆ ಬಾಯಿ ಹಾಕಿತು, " ಕೊಟ್ಟಿಗೆಯಲ್ಲಿರುವ ದನಕರುಗಳನ್ನು ಸಹನೋಡಿಕೊಳ್ಳುತಿರುವಂತೆ ಅಪ್ಪಣೆ ಮಾಡಿ'

ಅದರಂತೆ ಅಪ್ಪಣೆಯಾಯಿತ.

ಈ ಐದು ಮಂದಿ ಮನೊಯೊಳಗೆ ಹೋದರು. ಅವರ ಹಿಂದೆ ಮಂಜಪ್ಪ ಹೋದ. ಜಗುಲಿಯ ಮೇಲೆ ಹ್ಯಾಟಿನ ವ್ಯಕ್ತಿ ಗಟ್ಟಿಯಾಗಿ ಕೇಳಿತು, " ಮನೆಯೊಳಗೆ ಯಾರು ? ಯಜಮಾನರೆಲ್ಲಿ ?"

ಮಂಜಪ್ಪ ಅಂಜುತ್ತಾ ಮುಂದೆ ಬಂದು ಹೇಳಿದ, ಏನಾಗಬೇಕು ? ಅವರಿಗೆ ತುಂಬಾ ಕಾಹಿಲೆ. ನಾನೇ ಅವರ ಮಗ."

" ಎಲ್ಲಿ! ಇಲ್ಲಿಗೆ ಕರೆದುಕೊಂಡು ಬಾ."

" ಹಾಸಿಗೆ ಬಿಟ್ಟು ಬರುಹಾಗಿಲ್ಲ. ನನ್ನೊಂದಿಗೆ ಹೇಳಿ ಏನಾಗಬೇಕು.?"

" ಇವರಿಬ್ಬರ ಗುರುತಿದೆಯೇ? ಇವರು ಯಾರು?"

" ಒಬ್ಬರ ಜವಾನನ್ನು ರೂಢಿಸುತ್ತೇವೆ; ಇನ್ನೊಬ್ಬರ ಹತ್ತಿರ ಸಾಲ ಐದೆ."

" ಗುತ್ತಿಗೆಯನ್ನು ಏಕೆ ಸಲ್ಲಿಸಲಿಲ್ಲ? ಅವರ ಬಡ್ಡಿ ಏಕೆ ಬಾಕಿಯಾಯಿತು?"

" ಅವರಿಗೆ ಎಲ್ಲಾ ವಿಚಾರ ತಿಳಿಸಿದೆ. ತಿರುಗಿ ನಾನೇನು ಹೇಳಲಿ?"

" ಬಾಕಿಗೆ ನಿಮ್ಮ ಮನೆ, ದನಕರು, ಸಾಮಾನು ಗಿಮಾನುಗಳನ್ನೆಲ್ಲ ಜಪ್ತಿ ಮಾಡಿದ್ದಾರೆ. ಸಾಮಾನುಗಳನ್ನೆಲ್ಲ ಹೊರಗೆ ಹಾಕಿ ತೆಗೆದುಕೊಳ್ಳಿ ಆರ್ಡರ್, ಇದಕ್ಕೆ ನಿಮ್ಮ ತಂದೆಯು ರುಜುಮಾಡಿಸು."

ಪೇಟದ ವ್ಯಕ್ತಿಯೊಂದು ಮನೆಯ ಮಾಳಿಗೆ, ನೆಲ, ಮುಂಡಿಗೆಯನ್ನೆಲ್ಲ ನೋಡಿ ಹೇಳಿತು, " ತುಂಬಾ ಹಳೆಯ ಮನೆ" ಕಾಸಿನ ಪ್ರಯೋಜನಕ್ಕೂ ಬರುವುದಿಲ್ಲ.''

" ಹಣ ಕೊಟ್ಟ ಪ್ರಾಯಶ್ಚಿತಕ್ಕೆ ಹೊಸದು, ಹಳೆದು ಯಾವುದನ್ನೂ

ನೋಡಬಾರದು. ಲೆಕ್ಕ ಜಮಾ ಮಾಡಿಕೊಂಡರೆ ಸರಿ" ಎಂದು ಹಣ ಸಾಲ ಕೊಟ್ಟ ವ್ಯಕ್ತಿ ಹೇಳಿತು.

" ಈ ಊರಿಗೆ ರಸ್ತೆಯಿಲ್ಲ. ತಲೆಯಮೇಲೆ ಇಲ್ಲಿಂದ ಸಾಮಾನೆಲ್ಲ ರಸ್ತೆಗೆ ಸಾಗಿಸಬೇಕು." ಎಂದು ಎರಡನೆಯ ಪೇಟದ ವ್ಯಕ್ತಿ ಹೇಳಿತು.

ಹಣ ಸಾಲ ಕೊಟ್ಟ ವ್ಯಕ್ತಿ ಹೇಳಿತು," ಗಂಟು ಕೊಟ್ಟ ತಪ್ಪಿಗೆ ಎಲ್ಲಾ ಮಾಡಬೇಕು."

ಗರಗಸ ಇನ್ನೂ ಪ್ರಚಾರಕ್ಕೆ ಬಾರದ ಸಮಯದಲ್ಲಿ ಆ ಮನೆ ಬಾಚಿಯಲ್ಲಿ ಕೆತ್ತಿ ಕಟ್ಟಿದುದು. ಒಂದು ಕಡೆ ಕುಸಿದು ತೊಲೆ ಬಾಗಿತ್ತು. ತಾಯಿ ಹರಕು ಸೀರೆಯನ್ನುಟ್ಟಿದ್ದ ಮಾತ್ರಕ್ಕೆ ಮಕ್ಕಳಿಗೆ ಆಕೆಯ ಮೇಲೆ ಪ್ರೇಮ ಕಡಮೆಯಾಗುವುದೇ? ದೊಡ್ಡ ಬಂಗಲೆಗಳಲ್ಲಿ ವಾಸಮಾಡುವ ಶ್ರೀಮಂತರಿಗೆ ಅವು ಪ್ರಿಯವಾಗಿರುವುದಕ್ಕಿಂತ ಕುಸಿರುವ ಆ ಪಾಳುಮನೆ ಆ ಪರಿವಾರಕ್ಕೆ ಅಧಿಕ ಪ್ರಿಯವಾಗಿತ್ತು. ತಾವು ಸುರಿದಿರುವ ಹಣಕ್ಕಿಂತ ಹೆಚ್ಚು ಬೆಲೆ ಬಂದರೆ ಶ್ರೀಮಂತರು ತಮ್ಮ ಬಂಗಲೆಯನ್ನು ಮಾರಿಬಿಡುವರು. ಅವರಿಗೆ ಪ್ರಿಯವಾದ್ದು ಹಣ; ವಸ್ತುವಲ್ಲ. ಕರಡೊಳ್ಳಿಯವರ ವಿಚಾರ ಹಾಗಲ್ಲ. ತಮ್ಮ ಪೂರ್ವೀಕರಷ್ಟೇ ಅದು ಪ್ರಿಯವಾದ್ದು. ಆ ಮನೆಯ ಮೂಲೆ ಮೂಲೆಯಲ್ಲಿ ಹಿರಿಯರ ಬಾಳು ಬಸಿದಿದೆ. ಪ್ರತಿಯೊಂದು ಮರದ ಚೂರು, ಮಣ್ಣಿನ ಮುದ್ದೆ ಪವಿತ್ರವಾದ್ದು. ಏತಕ್ಕೆಂದರೆ ಪೂರ್ವೀಕರು ಪರಿಶ್ರಮದಿಂದ ಅದನ್ನು ಕಟ್ಟಿದ್ದರು. ಆ ಕೊಂಪೆಯಲ್ಲಿರುವ, ಆ ಹಳೆಯ ಮನೆಗೆ ಈಗ ಬೂಟ್ಸನ್ನು ನೋಡುವ ಸುಯೋಗಲಭಿಸಿತು.

ಜಗುಲಿಯ ಗಲಾಟೆಯನ್ನು ಕೇಳಿ ಕೈಯಲಿದ್ದ ಪಾತ್ರೆಯನ್ನು ಹಾಗೆಯೇ ಹಿಡಿದುಕೊಂಡು ನಂಜವ್ವ ಹೊರಗೆ ಬಂದಳು. ಇಲ್ಲಿ ಮಹಾ ಭಾರತ ಆರಂಭವಾಗಿತ್ತು. ತಲೆಯನ್ನು ಹಿಡಿದುಕೊಂಡು ಅಲ್ಲೇ ಅಳುತ್ತಾ ಕುಳಿತುಕೊಂಡಳು. ಸಿದ್ದಪ್ಪ ಅಲ್ಲಿಯೇ ಹಾಸಿಗೆಯ ಮೇಲೆ ಮಲಗಿದ್ದ. ಆತನಿಗೆ ಪ್ರಜ್ಞೆ ಇತ್ತೋ ಇಲ್ಲವೋ ತಿಳಿಯದು. ಆಳು ಮನೆ ನುಗ್ಗಿ ಸಂದಿ ಗೊಂದಿಯನ್ನೆಲ್ಲ ಚೆನ್ನಾಗಿ ಹುಡುಕಿ ಸಾಮಾನುಗಳನ್ನು ತಂದು ಅಂಗಳ ದಲ್ಲಿ ಪ್ರದರ್ಶನಕ್ಕಿಡುವಂತೆ ಇಟ್ಟರು.

ಕೊಟ್ಟಿಗೆಯಲ್ಲಿರುವ ಜಾನುವಾರುಗಳನ್ನು ತರಲು ಒಬ್ಬರಿಂದಲೂ ಸಾಧ್ಯವಾಗಲಿಲ್ಲ. ಹೊಸಬರನ್ನು ನೋಡಿ, ಅವು ಕಣ್ಣು ಕೆರಳಿಸಿ, ಕಿವಿ ನೆಟ್ಟಗೆ ಮಾಡಿ ಅರಬ್ಬಿ ಕುದುರೆಗಳಂತೆ ಕುಣಿಯುತಿದ್ದವು. ಅವುಗಳ ಹತ್ತಿರ ಹೋಗುವ ಧೈರ್ಯ ಯಾರಿಗೂ ಇಲ್ಲ. ಮಂಜಪ್ಪನನ್ನು ಕರೆಯಬೇಕಾಯಿತು. ಬಾಲವನ್ನು ನಿಮಿರಿಸಿ ಕುಣಿಯುತಿದ್ದ ದನಕರುಗಳು ಮಂಜಪ್ಪನನ್ನು ನೋಡುತ್ತಲೇ ನಾಯಿಯಂತೆ ತೆಪ್ಪಗಾದವು. ಕೆಲವು ಅವನನ್ನು ಮೂಸಲು, ಕೆಲವು ಮೂತಿ ತಿಕ್ಕಲು ಮುಂದೆ ಬಂದವು. ಎಲ್ಲವನ್ನೂ ಒಂದೊಂದಾಗಿ ಬಿಚ್ಚಿ ತಂದು ಅಂಗಳದಲ್ಲಿ ಕಟ್ಟಿದ.

. ಬೆಲೆಯ ನಿಷ್ಕರ್ಷೆ ಪ್ರಾರಂಭವಾಯಿತು. ತನಗೂ ಜಾನುವಾರ ಗಳಿಗೂ ಸಂಬಂಧವೇ ಇಲ್ಲವೋ ಎನ್ನುವ ರೀತಿಯಲ್ಲಿ ಮಂಜಪ್ಪ ದೂರ ಸರಿದು ನಿಂತಿದ್ದ. ಮಧ್ಯಾಹ್ನವಾಗುತ್ತಾ ಬಂತು. ಜಮಾಖರ್ಚು ಮುಗಿಯ ಲಿಲ್ಲ. ದನಕರುಗಳು ಹಗ್ಗವನ್ನು ಜಗ್ಗಿಸುತ್ತಾ 'ಅಂಬಾ' ಎನ್ನುತಿದ್ದವು.

ಅಳುತಿದ್ದ ನಂಜಮ್ಮ ದನಕರುಗಳನ್ನು ಅಂಗಳದಲ್ಲಿ ತಂದು ಕಟ್ಟುವುದನ್ನು ನೋಡಿ ಭೂಮಿಯ ಮೇಲೆ ಬಿದ್ದಿದಳು. ಈ ಕಡೆಯ ಪ್ರಪಂಚದ ಗೊಡವೆ ತಪ್ಪಿಹೋಯಿತು. ಕಣ್ಣೀರಿನ ಕೋಡಿ ಹರಿಯುತಿತ್ತು. ಅತ್ಯಾಚಾರಿಗಳು ಗಂಡನನ್ನು ಮರಕ್ಕೆ ಕಟ್ಟಿ ಆತನ ಪ್ರೇಮದ ಮಡದಿಯನ್ನು ಹೊತ್ತು ಕೊಂಡು ಹೋಗುತಿರುವಾಗ ಆತನ ಅವಸ್ಥೆ ಹೇಗಿರುವುದೋ ಅದೇ ಅವಸ್ಥೆಯಲ್ಲಿ ಸಿದ್ದಪ್ಪನಿದ್ದನೆನ್ನಬಹುದು. ಪ್ರೇಮದಿಂದ ಸಾಕಿಸಲುಹಿದ ದನಕರುಗಳು ಸಾಲಗಾರರ ಪಾಲಾಗುತಿವೆ. ಅವನು ಮಲಗಿ ನೋಡು ತಿರುವನು. ನದಿಯಲ್ಲಿ ನೀರು ಮೇಲಕ್ಕೆ ನಿಂತಂತೆ ಕಾಣುವುದು, ಅದರ ಗರ್ಭದಲ್ಲಿರುವ ಪ್ರಚಂಡ ಪ್ರವಾಹವನ್ನು ಅರಿತವರು ಯಾರು?

ಜಪ್ತಿ ಮುಗಿಯಿತು, ಮುಖದ ಮೇಲೆ ತೃಪ್ತಿ ಮಂಡಿಸಿತು. ಲೆಕ್ಕಪತ್ರ ವಾದ ಮೇಲೆಇನ್ನೂ ಹತ್ತು ರೂಪಾಯಿ ಬಾಕಿ ನಿಂತಿತು. ಮನೆಯನ್ನು ಆ ಬಾಕಿಗೆ ವಜಾಹಾಕಲು ಯೋಚಿಸಿದರು. ಅದನ್ನು ತೆಗೆದುಕೊಂಡು ಹೋಗುವ ಹಾಗಿಲ್ಲ ; ಅವರು ಬಂದು ವಾಸಮಾಡುವ ಹಾಗಿಲ್ಲ ; ಕೊಂಡು ಕೊಳ್ಳಲು ಇಲ್ಲಿಗೆ ಯಾರೂ ಬರುವುದಿಲ್ಲ. ಮನೆಯನ್ನು ಪರೀಕ್ಷೆಮಾಡು ತಿರುವಾಗ ಗೋಡೆಯ ಮೇಲೆ ಶ್ರೀರಾಮದೇವರ ಬೆಳ್ಳಿಯ ವಿಗ್ರಹದ ಪಠವೊಂದಿತ್ತು. ಅದರ ಮುಂದೆ ಬೆಳ್ಳಿಯ ಸಣ್ಣ ದೀಪದ ಕಂಭವಿತ್ತು. ಬಾಕಿಗೆ ಮನೆ ತೆಗೆದು ಕೊಳ್ಳುವುದು ತಪ್ಪಿತಲ್ಲ ಎಂದು ಅವರಿಗೆ ಪ್ರಾಣ ಬಂತು. ಬಾಕಿಗೆ ಬೆಳ್ಳಿಯ ವಿಗ್ರಹದ ಪಠ ಮತ್ತು ಬೆಳ್ಳಿಯ ಸಣ್ಣ ದೀಪದ ಕಂಭ ವಜಾ ಹಾಕಿ ಏನೂ ಬಾಕಿಯಿಲ್ಲವೆಂದು ಬರೆದು ಕೊಟ್ಟು ಹೋದರು.

## ಏಳು

ಮೂಗತಿಯನ್ನು ಕಳಕೊಂಡ ಮೂಗಿನಂತೆ ಕರಡೊಳ್ಳಿಯ ಕಾರುಬಾರು ಹಗುರವಾಯಿತು. ದನಕರು ಮೇಯಿಸುವ ಹಂಗಿಲ್ಲ; ಗದ್ದೆಗೆ ಹೋಗುವ ಕಷ್ಟವಿಲ್ಲ. ತಾಯಿ ಮಗ ಇಬ್ಬರೂ ಸಿದ್ದಪ್ಪನ ಹಾಸಿಗೆಯ ಹತ್ತಿರ ಜೋಲು ಮುಖ ಹಾಕಿಕೊಂಡು ಕುಳಿತಿರುತಿದ್ದರು. ಸಿದ್ದಪ್ಪ ಮಲಗಿರುತ್ತಿದ್ದ.

ಹಳ್ಳಿಯಲ್ಲಿ ಕೆಲಸ ಕೊಡುವವರು ಯಾರು? ಕೊಡುವ ಪುಣ್ಯಾತ್ಮ ಎಲ್ಲಿಯಾದರು ದೊರೆತರೂ ಸ್ವತಂತ್ರವಾಗಿ ಜೀವಿಸಿದ ರೈತ ತನ್ನೂರಿನಲ್ಲಿ ಎಂದೂ ಕೂಲಿ ಕೆಲಸ ಮಾಡುವುದಿಲ್ಲ. ಮಂಜಪ್ಪನಿಗೆ ಊರು ಬಿಟ್ಟು ಹೋಗಲು ತಂದೆಗೆ ಕಾಹಿಲೆ.

ಮಳೆ ಹಿಡಿಯಿತು; ಎಲ್ಲರೂ ಗದ್ದೆಗಿಳಿದರು. ತಾನು ಮುಂಚೆ ಗದ್ದೆ ನಟ್ಟು ಮುಗಿಸಬೇಕು, ತಾನು ಮುಗಿಸಬೇಕು ಎಂಬ ಹುರುಪಿನಲ್ಲಿ ರೈತರಿದ್ದರು. ಜಪ್ತಿಗೆ ಮುಂಚೆ ಈ ಮನೆಯಲ್ಲಿಯೂ ಅದೇ ಹುರುಪಿತ್ತು; ಅದೇ ಉತ್ಸಾಹವಿತ್ತು. ಈಗ ನೊಗ ಅಟ್ಟದಮೇಲೆ, ಜೋತಗ 'ಚಾಕಿ, ಯ ಗೂಟದಲ್ಲಿ. ಇವೆಲ್ಲ ಹೀಗೆ ಮೂಲೆ ಹಿಡಿದಿರಬೇಕೆ? ಕಾಲಗತಿ.

ಭೂಮಿ ತಿರುಗುತಿತ್ತು; ಸೂರ್ಯಹುಟ್ಟಿ ಮುಳುಗುತಿದ್ದ; ಕರಡೊಳ್ಳಿಯವರ ಮನೆಯಲ್ಲಿ ಬೈಗು ಬೆಳಗಾಗುತಿತ್ತು.

ಒಂದು ದಿನ ಹ್ಯಾಟು, ಕೋಟು, ಬೂಟ್ಸಿನ ವ್ಯಕ್ತಿಯೊಂದು ಕರ

ಡೊಳ್ಳಿಯರ ಮನೆಯ ಮೆಟ್ಟಿಲನ್ನು ಹತ್ತಿ ಜಗುಲಿಗೆ ಬಂತು. ಇವರನ್ನು ಕರೆದವರು ಯಾರು? ಕರೆದರೇ ಬರಲು ಅಪರೂಪವಾಗಿರುವಾಗ ಕರೆಯದೆ ಏಕೆ ಬಂದರು? ಹೊಸವಿಪತ್ತಿನ ಭಯ ಎಲ್ಲರನ್ನೂ ನುಂಗಿತು; ಎದೆ ತಲ್ಲಣಿಸುತಿತ್ತು. ಆ ವ್ಯಕ್ತಿ ಜೋಬಿನಿಂದ ಒಂದು ಪಟ್ಟಿಯನ್ನು ತೆಗೆದು ಕೇಳಿತು, "ಇದು ಸಿದ್ದಪ್ಪನವರ ಮನೆಯೆ?" ಮಂಜಪ್ಪ ಹತ್ತಿರ ಬಂದು, "ಹೌದು, ಇದು ಅವರಮನೆ. ಕಾಹಿಲೆಯಿಂದ ಹಾಸಿಗೆ ಹಿಡಿದಿರುವರು." ಎಂದ.

ಸಿದ್ದಪ್ಪನ ಹಾಸಿಗೆಯ ಹತ್ತಿರ ಹೋಗಿ, ಪಕ್ಕದಲ್ಲಿ ಕುಳಿತುಕೊಂಡು ಆ ವ್ಯಕ್ತಿಹೇಳಿತು, "ಸರಕಾರದವರು ನನ್ನನ್ನು ಸ್ಪೆಷಲ್ ಡ್ಯೂಟಿಯಮೇಲೆ ಕಳುಹಿಸಿದ್ದಾರೆ. ಕೆಲವು ವಿಚಾರಗಳನ್ನು ನಿಮ್ಮಿಂದ ತಿಳಿಯಬೇಕು."

ಸ್ಪೆಷಲ್ ಡ್ಯೂಟಿ ಆಫಿಸರ ಸೌಮ್ಯರೂಪ, ಹಿತವಾದ ಮಾತನ್ನು ಕೇಳಿ ಕರಡೊಳ್ಳಿಯವರ ಮನಸ್ಸಿನ ತಲ್ಲಣವು ಸ್ವಲ್ಪ ಕಡಮೆಯಾಯಿತು. ಸಿದ್ದಪ್ಪ ಮಲಗಿ ಕೊಂಡಲ್ಲಿಯೇ ಕೆಮ್ಮುತ್ತ ಹೇಳಿದ, "ಅಪ್ಪಣೆಯಾದರೆ ಇದ್ದ ವಿಚಾರ ತಿಳಿದ ಮಟ್ಟಿಗೆ ಹೇಳುತ್ತೇನೆ."

ಕೈಯಲ್ಲಿರುವ ಪಟ್ಟಿಯನ್ನು ನೋಡುತ್ತಾ ಸ್ಪೆಷಲ್ ಡ್ಯೂಟಿ ಆಫೀಸರು ಕೇಳಿದರು, "ನೀವು ಸ್ವಂತ ಖಾತೆದಾರರೋ?"

ಸಿದ್ದಪ್ಪನ ಅಂಗಾಂಗಗಳಲ್ಲಿ ಕಾವೇರಿತು; ನಾಳಗಳಲ್ಲಿ ಬಿಸಿ ರಕ್ತದ ಸಂಚಾರವಾಯಿತು; ಕಂದಿದ ಮುಖ ಅರಳಿತು. ಹಾಸಿಗೆಯ ಮೇಲೆ ಅನಾ

ಯಾಸವಾಗಿ ಕುಳಿತುಕೊಂಡ. ತಂದೆ ಕುಳಿತುಕೊಳ್ಳುವುದನ್ನು ನೋಡಿ ಮಂಜಪ್ಪ ಹಿಡಿದು ಕೊಳ್ಳಲು ಹತ್ತಿರ ಹೋದ. ಮಗನನ್ನು ಗದರಿಸಿ ಸಿದ್ದಪ್ಪ ಹೇಳಿದ, "ನನಗೇನಾಗಿದೆ ಹಿಡಿದು ಕೊಳ್ಳುವುದಕ್ಕೆ ನೀವೆಲ್ಲ ನನ್ನ ಹಿಡಿದು ಎದ್ದು ಕೂರಿಸಿ ಹೀಗೆ ಮಾಡಿದಿರಿ." ತಂದೆಯ ಮಾತನ್ನು ಕೇಳಿ ಮಂಜಪ್ಪ ಸರಿದು ದೂರ ನಿಂತ. ಸಿದ್ದಪ್ಪ ಸ್ಪೆಷಲ್ ಡ್ಯೂಟಿ ಆಫೀಸರ ಹತ್ತಿರ ಹೇಳಿದ, "ಒಂದು ಸಮಯ ಆಗಿದ್ದೆ. ಈಗ ಜಮೀನೆಲ್ಲ ಸಾಲಕ್ಕೆ ಪರಭಾರೆಯಾಗಿದೆ."

"ಸರಿ, ನೀವು ಎಷ್ಟು ವರ್ಷದಿಂದ ಜಮೀನನ್ನು ಗುತ್ತಿಗೆ ಮಾಡುತಿದ್ದೀರಿ?"

"ನಮ್ಮ ಜಮೀನು ಸಾಲಕ್ಕೆ ಪರಭಾರೆಯಾದ ಮೇಲೆ ಅದೇ ಜಮೀನನ್ನು ಸುಮಾರು ಮೂವತ್ತು ವರ್ಷದಿಂದ ರೂಢಿಸಿಕೊಂಡು ಬರುತಿದ್ದೇನೆ."

"ನಿಮಗೇನಾದರೂ ಸಾಲವಿದೆಯೆ?"

"ಸಾಲದಲ್ಲಿಯೇ ಹುಟ್ಟಿ, ಸಾಲದಲ್ಲಿಯೇ ಬೆಳೆದು ಸಾಲದಲ್ಲಿಯೇ, ಸಾಯುತ್ತಿದ್ದೆ. ದೇವರು ಅದನ್ನು ತಪ್ಪಿಸಿದ. ಮೊನ್ನೆ ದನಕರು, ಪಾತ್ರೆ ಪಟ್ಟೆ ಎಲ್ಲವನ್ನೂ ಚೂರು ಬಿಡದೆ ಸಾಲಕ್ಕೆ ದೋಚಿಕೊಂಡು ಹೋದರು.

"ಹಾಗಾದರೆ ನಿಮ್ಮ ಜಮೀನು ಸಾಲಗಾರರ ವಶವಾಗಿದೆ"

" ಹೌದು. ಮೂಲಧನಕ್ಕೆ ಮೂರರಷ್ಟು ಹಣ ಸಾಲಗಾರರಿಗೆ ಬಡ್ಡಿ ರೂಪದಲ್ಲಿ ಕೊಟ್ಟದಾಯಿತು. ಆದರೂ ಮೂಲಧನ ಕರಗಲಿಲ್ಲ, ಜಮೀನು ಸಾಲಕ್ಕಾಯಿತು. ಆದೇ ಜಮೀನನ್ನು ಗುತ್ತಿಗೆಗೆ ಮಾಡಿಕೊಂಡಿದ್ದೆ. ಗುತ್ತಿಗೆ ಬಾಕಿಯಾಗಿದ್ದಕ್ಕೆ ಮನೆಯಲ್ಲಿದ್ದ ದನಕರು, ಪಾತ್ರೆ ಪಟ್ಟಿಗಳನ್ನೆಲ್ಲ ತೆಗೆದುಕೊಂಡು ಹೋದರು."

ಸ್ಪೆಷಲ್ ಡ್ಯೂಟಿ ಆಫೀಸರು ಒಂದು ಸರಕಾರಿ ನಿರೂಪಣವನ್ನು ತೆಗೆದುಕೊಟ್ಟರು. ಅದು ಹೀಗಿತ್ತು :

ರೂಢಿಸುತ್ತಾ ಹತ್ತುವರ್ಷವಾಗಿದ್ದರೆ, ರೂಢಿಸಿಕೊಂಡು ಬರುತ್ತಿದ್ದ ಆ ಜಮೀನು, ಅದಕ್ಕೆ ಸಂಬಂಧಪಟ್ಟ ಮರ, ಹಾಡ್ಯ, ಕಾಲುವೆಗಳೆಲ್ಲ ಆ ಗುತ್ತಿಗೆದಾರರ ಅಧಿಕಾರಕ್ಕೆ ಒಳಪಡತಕ್ಕದ್ದು. ಅದೇ ರೀತಿ ಎಂಟು ವರ್ಷ ಒಂದು ಕಡೆ ಲೇವಾದೇವಿ ನಡೆದಿದ್ದರೆ ಅಥವಾ ಮೊತ್ತದಷ್ಟೇ ಬಡ್ಡಿ ಸಂದಾಯವಾಗಿದ್ದರೆ ಆ ಎಲ್ಲಾ ಸಾಲವು ಈ ಮೂಲಕ ರದ್ದಾಗತಕ್ಕದ್ದು.

ಸಿದ್ದಪ್ಪ ಸ್ಪೆಷಲ್ ಡ್ಯೂಟಿ ಆಫೀಸರನ್ನು ಕೇಳಿದ, " ದೇವರು ಒಳ್ಳೆಯದನ್ನು ಮಾಡಲಿ. ನಮ್ಮ ಜಮೀನು ನಮ್ಮ ವಶವಾಗುತದೆಯೇ ?"

" ಹೌದು ಈ ನಿರೂಪಣೆಯ ಪ್ರಕಾರ ನಿಮ್ಮ ಜಮೀನಿನ ಹಕ್ಕು ನಿಮಗೆ ಬಂದಿದೆ "

ಸಿದ್ದಪ್ಪ ಎದ್ದು ನಿಂತ. ಮಂಜಪ್ಪ ಮತ್ತು ನಂಜಮ್ಮ ಗಾಭರಿಯಿಂದ ಅವನನ್ನು ಹಿಡಿದುಕೊಳ್ಳಲು ಬಂದರು. ಅವರನ್ನು ತಳ್ಳಿ ಸಿದ್ದಪ್ಪ ಹೇಳಿದ, "ನನಗೆ ಕಾಹಿಲೆಯೂ ಇಲ್ಲ ಏನೂ ಇಲ್ಲ. ಚೆನ್ನಾಗಿ ಆರೋಗ್ಯ ವಾಗಿದ್ದೇನೆ. ನನಗೆ ಕಾಹಿಲೆ ಎಂದು ಯಾರು ಹೇಳಿದರು? ಮಂಜ! ಹೋಗಿ ಎತ್ತು ಹೊಡೆದುಕೊಂಡು ಬಾ! ಜಮೀನು ನಮಗಾಯಿತು. ನಾನು ಜೊತಗ ಮಿಣಿ ತೆಗೆದುಕೊಂಡು ಗದ್ದೆಗೆ ಹೋಗುತ್ತೇನೆ. ಗದ್ದೆಯಲ್ಲಿ ನೀರು ಚೆನ್ನಾಗಿ ಆಗಿರಬೇಕು." ಎಂದು ಹೇಳುತ್ತಾ ಹೋಗಿ ಗೂಟದಲ್ಲಿ ತೂಗುಹಾಕಿದ್ದ ಜೊತಗವನ್ನು ತಲೆಗೆ ಸಿಕ್ಕಿಸಿಕೊಂಡು ಸಿದ್ದಪ್ಪ ಮನೆಯಿಂದ ಗದ್ದೆಯ ಗಡೆಗೆ ಹೊರಟೇ ಬಿಟ್ಟ.



# ನಂಬಿಕೆ ಕ್ರಯಪತ್ರ

## ಒಂದು

ಯುಕ್ತಿ, ನಿಯಮಗಳೆರಡು ಇಂದಿನವರೆಗೂ ಬುದ್ಧಿವಂತಿಕೆಯ ಲಕ್ಷಣಗಳಾಗಿಯೇ ಉಳಿದುಕೊಂಡು ಬಂದಿವೆ. ಆಚರಣೆ ದಡ್ಡರ ಲಕ್ಷಣ; ಎತ್ತಿನ ಹೆಗಲಮೇಲೆ ಗಾಡಿಯ ನೊಗವಿದ್ದಂತೆ. ಎತ್ತು ನಡೆದರೆ ಗಾಡಿ ಚಕ್ರ ತಿರುಗುವುದು; ನಿಂತರೆ, ನಿಲ್ಲುವುದು. ಬುದ್ಧಿವಂತರು ಗಾಡಿಯ ಮೇಲೆ ಕೂರುವರು, ಸಾಮಾನು ತುಂಬುವರು. ತಾವು ಸೇರಬೇಕಾದ ಸ್ಥಳ ಬಂದಕೂಡಲೇ ಇಳಿದುಹೋಗುವರು. ಗಾಡಿಯೊಳಗೆ ಕುಳಿತವರ ಗಮನ ಎತ್ತಿನ ಹುಲ್ಲು, ಹುರುಳಿ, ನೀರಿನ ಕಡೆಗಿರುವುದಿಲ್ಲ, ಚಕ್ರ ಸರಾಗ ವಾಗಿ ತಿರುಗುವುದೇ ಎಂದು ನೋಡುತಿರುತ್ತಾರೆ. ಚಕ್ರ ಮುರಿದರೆ ಪ್ರಯಾಣಿಕರಿಗೆ ಅಪಾಯವಾದ್ದರಿಂದ ಎಚ್ಚರಿಕೆ, ಹಾಗೆ ಎತ್ತು ಸಾಯ ದಿರುವಂತೆಯೂ ವ್ಯವಸ್ಥೆಮಾಡುತ್ತಾರೆ. ಎತ್ತು ಸತ್ತರೆ ಗಾಡಿ ಮುಂದಕ್ಕೆ ಹೋಗುವುದಿಲ್ಲ.

ಹಿಂದೂಸ್ಥಾನದಲ್ಲಿ ರೈತರ ಸ್ಥಿತಿ ಗಾಡಿಗೆ ಕಟ್ಟಿದ ಎತ್ತಿನಂತೆ. ಅವರು ಸಾಯಲೂ ಬಾರದು, ಮನುಷ್ಯರಾಗಿ ಬದುಕಲೂ ಬಾರದು ಆ ರೀತಿಯಲ್ಲಿ ಕಾಯಿದೆ ಕಾನೂನುಗಳು ಹುಟ್ಟುತಿರುತ್ತವೆ. ಎಳೆಯುವುದು ಎತ್ತು, ಅದಕ್ಕೆ ಬೇಕಾದ ಹುಲ್ಲು, ಹುರುಳಿ, ಸವಾರಿಮಾಡುವವನು ಬುದ್ಧಿ ವಂತ, ಅವನಿಗೆ ಬೇಕಾದ್ದು ಅನುಕೂಲ. ಒಬ್ಬನು ನಿಯಮಗಳನ್ನು ರಚಿಸುತ್ತಾನೆ, ಇನ್ನೊಬ್ಬನು ಪರಿಪಾಲಿಸುತ್ತಾನೆ. ಪರಿಪಾಲಿಸುವವನೇ ನಿಯಮಗಳನ್ನು ರಚಿಸಿಕೊಂಡರೆ ಅನ್ಯಾಯವಾಗಲಿ, ಭೇದಭಾವವಾಗಲಿ ಇರುವುದಿಲ್ಲ..

ಅಣ್ಣೇಮಕ್ಕಿ ನಾಗೇಗೌಡರು ಮುಂದಿನ ವರ್ಷ ತೀರಿಸುತ್ತೇನೆಂಬ ಧೈರ್ಯದಿಂದ ಸಾಲ ಎತ್ತಿದರು. ಅದೇ ಜಮೀನು; ಅದೇ ಉತ್ಪತ್ತಿ; ಸಾಲ ತೀರಿಸುವ ಬಗೆ ಹೇಗೆ? ಸಾಲದ ಜೊತೆಗೆ ಬಡ್ಡಿ ಕೂಡುತ್ತಾ ಬಂತು.

ಮುಂದಕ್ಕೆ ತೀರಿಸುತ್ತೇವೆಂದು ಮಾಡಿದ ನೂರೈವತ್ತು ರೂಪಾಯಿ ಸಾಲ ಐದು ವರ್ಷದಲ್ಲಿ ಮುನ್ನೂರಕ್ಕೇರಿತು.

ಹತ್ತು ಇಪ್ಪತ್ತು ರೂಪಾಯಿಯ ಸಾಲ, ಕೈಸಾಲ; ನೂರು, ಇನ್ನೂರು ರೂಪಾಯಿಯ ಸಾಲ, ವ್ಯೈಸಾಲ; ನೂರಾರು ರೂಪಾಯಿಗೇರಿದರೆ ಕ್ರಯಪತ್ರ.

ಅಣ್ಣೇಮುಕ್ಕಿ ನಾಗೇಗೌಡರ ಕೈಗಡ, ವ್ಯೈಸಾಲವಾಗಿ ಜಮೀನಿನ ಮೇಲೆ ಬಂತು. ಸಾಲಕೊಟ್ಟವರ ತಗಾದೆ ಹೆಚ್ಚಿತು. ರೈತರ ಸಾಲ ಮೂಲಗಳಿಗೆ ಆಧಾರ ಜಮೀನು.

ನಾಗೇಗೌಡರ ಹತ್ತಿರ ಸಾವಿರ ರೂಪಾಯಿ ಬೆಲೆಬಾಳುವ ಆಸ್ತಿ ಇತ್ತು. ಖಾತರಿಯ ಬಗ್ಗೆ ಈಗ ಜಮೀನನ್ನೇ ಸಾಲ ಕೊಟ್ಟವರ ವಶ ಮಾಡಬೇಕಾಯಿತು. ಸ್ಥಿರ, ಚರಸೊತ್ತುಗಳನ್ನು ಹಲವು ವಿಧದಲ್ಲಿ ಖಾತರಿಮಾಡಲಾಗುವುದು. ಅವುಗಳಲ್ಲಿ ದೀಡು, ಭೋಗ್ಯ, ವ್ಯೈಸಾಲ ಪತ್ರ ಹೆಚ್ಚು ಬಳಕೆಯಲ್ಲಿವೆ. ಇವು ಕೆಲವರನ್ನು ಕಾಪಾಡಿವೆ ಹಲವರನ್ನು ಮುಳುಗಿಸಿವೆ. ಹಣದ ಪ್ರಪಂಚದಲ್ಲಿ ಸಾಲಮಾಡುವವನಿಗೆ ಹಣದ ಮೇಲೆ ಎಷ್ಟು ತೀವ್ರಾಸಕ್ತಿಯಿರುವುದೋ ಅದಕ್ಕೆ ಹತ್ತರಷ್ಟು ತೀವ್ರಾಸಕ್ತಿ ಹಣಗಾರನಿಗೆ ಸಾಲಕೊಡುವುದರಲ್ಲಿರುತ್ತದೆ.

ನಾಗೇಗೌಡರ ಸಾಲ ಜಮೀನಿನ ಮೇಲೆ ಬಂದಾಗ ಸಾಹುಕಾರರು ದೀಡು, ಭೋಗ್ಯ, ವ್ಯೈಸಾಲ ಪತ್ರಗಳ ಮೇಲೆ ಸಾಲಕೊಡುವುದನ್ನು ಕಡಮೆ ಮಾಡಿದ್ದರು. ದೀಡು, ಭೋಗ್ಯದಲ್ಲಿ ಹಣಕ್ಕೆ ಖಾತರಿ ಇದ್ದರೂ ಜವಾಬುದಾರಿ ಕಡಮೆ; ಜಮೀನನ್ನು ವಶಪಡಿಸಿಕೊಳ್ಳಲು ಕೋರ್ಟು ಕಛೇರಿಗಳಿಗೆ ಅಲೆಯಬೇಕಾಗುವುದು. ಕೃತ, ತ್ರೇತ್ರ ಯುಗಗಳಲ್ಲಿ ದೀಡು, ಭೋಗ್ಯಗಳಿಂದ ಸಲೀಸಾಗಿ ಲೆಕ್ಕಾಚಾರವಾದರೂ ಆಗುತಿದ್ದಿರಬಹುದು, ಈ ಕಲಿಯುಗದಲ್ಲಿ ಕೋರ್ಟು, ಕಛೇರಿಗಳ ಅವಾಂತರದಲ್ಲಿ ಖಂಡಿತ ವಾಗಿಯೂ ಸಹಾಯ ದೊರೆಯುವುದಿಲ್ಲ. ದುಡ್ಡಿನವರಿಗೆ ಕೋರ್ಟು ಕಛೇರಿಗಳೆಂದು ಜನರಾಡಿಕೊಂಡರೂ ಲೆಕ್ಕಾಚಾರಗಳಿಗೆ ಕೋರ್ಟು ಅನುಕೂಲವಲ್ಲವೆಂದು ದುಡ್ಡಿನವರ ಮತ.

ವಿಚಾರವೇನೇ ಇರಲಿ, ನಿಜಾಂಶವು ಯಾವುದೇ ಆಗಲಿ ಸಾಹುಕಾರರು ಕೋರ್ಟುಗಳ ಮೆಟ್ಟಿಲನ್ನು ಹತ್ತಿಳಿಯುವ ಶ್ರಮ ಕಡಮೆಮಾಡಿಕೊಳ್ಳು ವುದಕ್ಕಾಗಿ ದೀಡು, ಭೋಗ್ಯ, ವ್ಯೆಸಾಲಪತ್ರಗಳ ಮೇಲೆ ಸಾಲ ಕೊಡು ವುದನ್ನು ಕಡಮೆ ಮಾಡುತ್ತಾ ಬಂದರು.

ದೀಡು, ಭೋಗ್ಯಗಳ ಮೇಲೆ ಸಾಲ ಕೊಡುವುದು ಕಡಮೆಯಾ ಯಿತೇ ವಿನಾ ಸಾಲ ಕೊಡುವುದಾಗಲಿ, ಮಾಡುವುದಾಗಲಿ ಕಡಮೆಯಾಗ ಲಿಲ್ಲ. ಸಾಹುಕಾರರಿಗೆ ಶ್ರಮವಿಲ್ಲದ ಖಾತರಿ ಬೇಕು; ರೈತರಿಗೆ ಸಾಲ ಬೇಕು. ಅಂಥಾ ಮಾರ್ಗವೊಂದು ಪ್ರಚಾರಕ್ಕೆ ಬಂತು. ಅದು ನಂಬಿಕೆಯ ಕ್ರಯ ಪತ್ರ. ನಾಗೇಗೌಡರು ತಮ್ಮ ಸಾವಿರ ರೂಪಾಯಿ ಬಾಳುವ ಜಮೀನನ್ನು ಸಾಲಕೊಟ್ಟ ಶಂಕರಪ್ಪಗೌಡರಿಗೆ ನಂಬಿಕೆ ಕ್ರಯ ಮಾಡಿ ಕೊಟ್ಟರು.

## ಎರಡು

ಕ್ರಯಪತ್ರ ನಂಬಿಕೆಯದಾಗಿರಲಿ, ನಿಜವಾದುದಾಗಿರಲಿ, ಸಾವಿರ ರೂಪಾಯಿ ಬೆಲೆ ಬಾಳುವ ಜಮೀನಿಗೆ ಹನ್ನೆರಡುವರೆ ರೂಪಾಯಿ ಛಾಪಾ ಕಾಗದ ಬೇಕು. ಹನ್ನೆರಡುವರೆ ರೂಪಾಯಿ ಛಾಪಾ ಕಾಗದದಿಂದಲೇ ಕ್ರಯ ಪತ್ರ ಮುಗಿಯುವುದಿಲ್ಲ. ಪತ್ರ ಬರೆಯುವವರು ಬೇಕು; ಸಾಕ್ಷಿದಾರರಾಗ ಬೇಕು; ಬರೆದ ಪತ್ರ ರಿಜಿಸ್ಟರಾಗಬೇಕಾದರೆ 'ಆಫೀಸಿ' ಗೆ ಮಾಮೂಲು ಸಲ್ಲಿಸಬೇಕು. ಇಷ್ಟೆಲ್ಲ 'ಕ್ರಿಯೆ' ಯಾದರೆ ಒಂದು ಜಮೀನಿನ ಕ್ರಯ ಪತ್ರವಾದ ಹಾಗಾಯಿತು. ಇವೆಲ್ಲ ಮುಗಿಯುವ ಹೊತ್ತಿಗೆ ಸಾವಿರ ರೂಪಾಯಿ ಬಾಳುವ ಆಸ್ತಿಗೆ ಕೊನೆಯ ಪಕ್ಷ ಐವತ್ತು ರೂಪಾಯಿಯಾ ದರೂ ಕರ್ಚಾಗುತ್ತದೆ. ನಂಬಿಕೆ ಕ್ರಯಪತ್ರದಲ್ಲಿರುವ ಮತ್ತೊಂದು ವಿಶೇಷ ವೇನೆಂದರೆ ಹಣ ತೆಗೆದುಕೊಳ್ಳುವಾಗಲೂ ಹಣ ಕೊಟ್ಟು ಜಮೀನನ್ನು ಬಿಡಿಸಿಕೊಳ್ಳುವಾಗಲೂ ಕ್ರಯಪತ್ರಕ್ಕೆ ತಗಲುವ ಎಲ್ಲಾ ಖರ್ಚನ್ನು ಸಾಲ ತೆಗೆದುಕೊಳ್ಳುವವನೆ ವಹಿಸಿಕೊಳ್ಳಬೇಕು.

ನಂಬಿಕೆ ಕ್ರಯಪತ್ರದಲ್ಲಿ ಸಾಹುಕಾರರು ಕೋರ್ಟಿಗೆ ಹೋಗಬೇಕಾ ಗುವುದಿಲ್ಲ, ಲೆಕ್ಕಪತ್ರಗಳನ್ನು ಹಾಜರು ಮಾಡಬೇಕಾಗಿರುವುದಿಲ್ಲ. ಕ್ರಯ

ಪತ್ರವಾದ ಕೂಡಲೇ ಪತ್ರ ಬರೆದುಕೊಟ್ಟವರಿಂದ ಗೇಣಿ ಚೀಟಿ ಬರೆಯಿಸಿಕೊಳ್ಳುತ್ತಾರೆ. ಆದ್ದರಿಂದ ಸುಲಭವಾಗಿ ಜಮೀನೂ ಸ್ವಾಧೀನಕ್ಕೂ ಬಂದ ಹಾಗಿರುತ್ತದೆ.

ನಾಗೇಗೌಡರು ತಮ್ಮ ಆಸ್ತಿಯನ್ನೆಲ್ಲ ಶಂಕರಪ್ಪಗೌಡರಿಗೆ ನಂಬಿಕೆ ಕ್ರಯಪತ್ರ ಮಾಡಿಕೊಟ್ಟ ಮಾರನೆಯ ವರ್ಷ ತೀರಿಕೊಂಡರು. ಅವರು ತೀರಿಕೊಂಡಾಗ ಕೆಲವರು ಅವರಿಗೆ ವಯಸ್ಸಾಗಿತ್ತೆಂದೂ ಕೆಲವರು ಅವರಿಗೆ ಕಾಯಿಲೆಯಾಗಿತ್ತೆಂದೂ ಮಾತನಾಡಿಕೊಂಡರು. ರೈತನಿಗೆ ಅವನ ಭಾಗ್ಯ, ಅವನ ಆಯುಸ್ಸು ಹಣೆಯ ಮೇಲೆ ಬರೆದಿರುವುದಿಲ್ಲ, ಅವನ ಜಮೀನಿನ ಮೇಲೆಬರೆದಿರುತ್ತದೆ. ರೈತ ಮೂಕನಾಗಿರುವುದರಿಂದ ತನ್ನ ವಿಚಾರವನ್ನು ವ್ಯಕ್ತಪಡಿಸಲಾರ; ಬುದ್ಧಿವಂತರಿಗೆ ರೈತರ ಕಷ್ಟಸುಖ ಗೊತ್ತಿಲ್ಲ. ಬುದ್ಧಿವಂತರ ಸುಖಸ್ವಪ್ನವೆಲ್ಲ ರೈತನ ದುಡಿತದಲ್ಲಡಗಿರುವುದರಿಂದ ರೈತನ ಕಷ್ಟಸುಖ ಗೊತ್ತಾದರೂ ವ್ಯಕ್ತಪಡಿಸಲು ಬಯಸುವುದಿಲ್ಲ. ಆದ್ದರಿಂದ ಪ್ರಪಂಚಕ್ಕೆ ರೈತನ ವಿಚಾರ ತಿಳಿಯದು. ಭೂಮಿ ರೈತನ ಕೈತಪ್ಪಿತೆಂದರೆ ರೈತ ಸತ್ತಹಾಗೆ. ನಾಗೇಗೌಡರ ಸಾವಿಗೆ ನಿಜವಾದ ಕಾರಣವೂ ಅದೇ.

ನಂಬಿಕೆ ಕ್ರಯಪತ್ರದ ಮಹಾತ್ಮ್ಯೆ ಸಾಕ್ಷಿ ಹಾಕಿರುವ ಒಬ್ಬಿಬ್ಬ ಆಪ್ತರ ವಿನಾ ಮತ್ತಾರಿಗೂ ಗೊತ್ತಿರುವುದಿಲ್ಲ. ನಂಬಿಕೆ ಕ್ರಯಪತ್ರ ಬರೆದುಕೊಟ್ಟವರು ಸತ್ತರೆಂದರೆ ಜಮೀನು ಆ ಮನೆತನದವರ ಕೈತಪ್ಪಿದಂತೆಯೇ. ಆದ್ದರಿಂದ ನಾಗೇಗೌಡರು ತೀರಿದ ತರುವಾಯ ಶಂಕರಪ್ಪಗೌಡರು ಸುಮ್ಮನಿರಬಹುದಿತ್ತು. ಅವರು ಹಾಗೆ ಮಾಡಲಿಲ್ಲ. ಸ್ವಾರ್ಥದೃಷ್ಟಿಯಿಂದ ಹಾಗೆ ಮಾಡಿದರೋ ಪಾರಮಾರ್ಥ ದೃಷ್ಟಿಯಿಂದ ಮಾಡಿದರೋ ದೇವರಿಗೆ ಗೊತ್ತು.

ಹಸುವಿಗೆ ಹೊಟ್ಟೆತುಂಬಾ ಹಿಂಡಿಹಾಕುವುದು ತಮ್ಮ ಹೊಟ್ಟೆ ಹಾಲಿನಿಂದ ತುಂಬಿಸಿಕೊಳ್ಳುವುದಕ್ಕೆ. ತನ್ನ ರಕ್ಷಣೆಯನ್ನಾಗಲಿ, ತನಗೆ ಆಹಾರವನ್ನಾಗಲೀ ಹಸು ಮನುಷ್ಯರಿಂದ ಬಯಸುವುದಿಲ್ಲ. ಅದು ಬಯಸುವುದು ಅವರ ಅಭಯಹಸ್ತ. ಸಾಹುಕಾರರು ತಮ್ಮ ಅಸಾಮಿಗಳನ್ನು ಬದುಕಿಸುವುದೂ ಇಲ್ಲ, ಸಾಯಿಸುವುದೂ ಇಲ್ಲ. ಅವರ ರಕ್ತವನ್ನು ಹೀರಿ ತಾವು ಬಲಿಷ್ಠರಾಗುತಿರುತ್ತಾರೆ. ರೈತರ ಸ್ಥಿತಿ ಉತ್ತಮಗೊಂಡರೆ ಸಾಲ

ಕೇಳಲು ಬರುವುದಿಲ್ಲ, ನಾಶಹೊಂದಿದರೆ ಬಡ್ಡಿ ತೆರುವವರಿರುವುದಿಲ್ಲ. ಜಮೀನನ್ನು ಆಕ್ರಮಿಸಿಕೊಂಡರೆ ತಾವೇ ಬೇಸಾಯದ ಹೊರೆಯನ್ನೂ ಹೊರಬೇಕಾಗುವುದು. ನಾಳೆಯಾದರೂ ತಮ್ಮ ಜಮೀನು ತಮ್ಮ ಕೈಸೇರಬಹುದೆಂಬ ಆಶೆಯಿಂದ ರೈತರು ಬಡ್ಡಿ ತೆರುತಿರುತ್ತಾರೆ.

ನಾಗೇಗೌಡರ ಮಕ್ಕಳು ಸುಬ್ಬಯ್ಯಗೌಡ, ಗುರಪ್ಪಗೌಡರಿಬ್ಬರನ್ನೂ ಶಂಕರಪ್ಪಗೌಡರು ಕರೆಯಿಸಿ ಗೇಣಿಚೀಟಿಯನ್ನು ಬರೆದುಕೊಡುವಂತೆ ಹೇಳಿದರು. ಗೇಣಿಗುತ್ತಿಗೆಗೆ ವ್ಯವಸಾಯ ಮಾಡದೆ ಸ್ವತಂತ್ರರಾಗಿ ಜೀವಿಸಿಕೊಂಡು ಬಂದ ಅಣ್ಣತಮ್ಮಂದಿರಿಬ್ಬರಿಗೂ ಅವರ ಮಾತು ರುಚಿಸಲಿಲ್ಲ. ಹಣಸಂದಾಯ ಮಾಡಿ ಜಮೀನನ್ನು ಹಿಂದಕ್ಕೆ ಪಡೆಯುವುದಾಗಿ ಹೇಳಿಬಂದರು.

ಸ್ವಲ್ಪ ಸಾಲಕ್ಕೋಸ್ಕರ ಆಸ್ತಿಯನ್ನು ಪರಭಾರೆ ಮಾಡಿರುವುದು ಸಹೋದರರಿಬ್ಬರಿಗೂ ಸರಿಬರಲಿಲ್ಲ. ಪ್ರಮಾದದಿಂದ ಪಾರಾದೆವೆಂದು ಇಬ್ಬರೂ ಭಾವಿಸಿ, ಯಾವ ರೀತಿಯಿಂದಾದರೂ ಹಣ ಪಾವತಿಮಾಡಬೇಕೆಂಬ ದೃಢಸಂಕಲ್ಪಮಾಡಿದರು.

## ಮೂರು

ತಮ್ಮ ಜಮೀನನ್ನು ಬಿಡಿಸಿಕೊಳ್ಳಲು ಸಹೋದರರಿಬ್ಬರು ತೋರಿಸಿದ ಸಾಹಸ ಅಪೂರ್ವವಾದ್ದು. ಸಾಲ ಒಂದೇ ಕಡೆ ಸಿಗಲಿಲ್ಲ. ಬೇರೆಬೇರೆ ಕಡೆ ಸ್ವಂತ ಜವಾಬುದಾರಿಯ ಮೇಲೆ ಇಬ್ಬರೂ ಸಾಲ ಎತ್ತಿದರು. ಕ್ರಯಪತ್ರ ಸುಸೂತ್ರದಿಂದ ನಡೆಯಿತು. ಮನೆಯಲ್ಲಿರುವ ಹಿರಿ ವ್ಯಕ್ತಿಯ ಹೆಸರಿಗೆ ಕ್ರಯಪತ್ರವಾಗುವುದೂ ನಡೆದುಬಂದ ಪದ್ಧತಿ. ಅದೇರೀತಿ ಸುಬ್ಬಯ್ಯಗೌಡನ ಹೆಸರಿಗೆ ಹನ್ನೆರಡುವರೆ ರೂಪಾಯಿ ಭಾಪಾಕಾಗದದ ಮೇಲೆ ಕ್ರಯಪತ್ರವಾಯಿತು. ಕ್ರಯಪತ್ರಕ್ಕೆ ಐವತ್ತು ರೂಪಾಯಿ ಖರ್ಚಾಯಿತು.

ಭೂಮಿಗೆ ಗುಳಮುಟ್ಟಿಸಬೇಕಾಗಿದ್ದರೆ ಹಣ ಪಾವತಿಮಾಡಿ ಜಮೀನನ್ನು ಹಿಂದಕ್ಕೆ ಪಡೆಯಬೇಕಿತ್ತು; ಅಥವಾ ಗೇಣಿಚೀಟಿ ಬರೆದುಕೊಡಬೇಕಿತ್ತು. ಎಲ್ಲರೂ ಗದ್ದೆಗೆ ಬೀಜಬಿತ್ತುತ್ತಿದ್ದುದರಿಂದ ಸುಬ್ಬಯ್ಯಗೌಡ,

ಗುರಪ್ಪಗೌಡ ಇಬ್ಬರೂ ಅವಸರದಿಂದ ಎರಡು ಕಡೆ ಸಾಲ ಎತ್ತಿ ಜವಿಾನನ್ನು ತಮ್ಮ ವಶಮಾಡಿಕೊಂಡರು. ಬೇಸಾಯ ಮುಗಿದ ತರುವಾಯ ಸಾಲ ಕೊಟ್ಟವರಿಗೆ ಯಾವುದಾದರೊಂದು ರೀತಿ ಸಾಮಾಧಾನ ಹೇಳಬೇಕಾಯಿತು. ಈ ಮಧ್ಯೆ ದಾರಿಯಲ್ಲಿ ಗುರಪ್ಪಗೌಡನಿಗೆ ಸಂಕರಪ್ಪಗೌಡರ ಭೇಟಿಯಾಗಿ ಯೋಗಕ್ಷೇಮಗಳ ತರುವಾಯ ಮಾತುಮಾತಿಗೆ ಶಂಕರಪ್ಪಗೌಡರು ಹೇಳಿದರು. "ನಾನೆನೋ ನನ್ನ ಹಣ ತೆಗೆದುಕೊಂಡು ನಿಮ್ಮ ಜವಿಾನನ್ನು ನಿಮಗೆ ಬಿಟ್ಟುಕೊಟ್ಟೆ. ಈಗ ಜವಿಾನೆಲ್ಲ ನಿನ್ನಣ್ಣನೊಬ್ಬನ ಹೆಸರಿಗಾಗಿದೆ. ನಾಳೆ ಸುಬ್ಬಯ್ಯಗೌಡ ತನ್ನ ಸ್ವಯಾರ್ಜಿತವೆಂದು ಹೇಳಿದರೇನುಮಾಡುವಿ? ಒಂದುವೇಳೆ ಸುಬ್ಬಯ್ಯಗೌಡನ ಕಾಲ ಹೀಗೆ ನಡೆಯಿತು. ನಾಳೆ ಅವನ ಮಕ್ಕಳು ತಮ್ಮ ತಂದೆಯ ಸ್ವಯಾರ್ಜಿತವೆಂದರೆ ನಿನ್ನ ಮಕ್ಕಳ ಅವಸ್ಥೆಯೇನಾಗಬೇಕು? ಒಳ್ಳೆಯದನ್ನು ಕೆಟ್ಟದನ್ನು ಯೋಚಿಸಿ ಕೆಲಸಮಾಡು."

ಇದು ನಡೆದ ನಾಲ್ಕೈದು ದಿನಕ್ಕೆ ಗುರಪ್ಪಗೌಡ ಸಾಲಮಾಡಿದ್ದ ಬಸಪ್ಪಗೌಡರಿಂದ ಕರೆಬಂತು. ಬಸಪ್ಪಗೌಡರು ಹೇಳಿದರು, "ನಮ್ಮ ಸಂಬಂಧಿಕನೆಂದು ಕೇಳಿದ ಕೂಡಲೇ ಹಣ್ಣ ಎತ್ತಿಕೊಟ್ಟೆ. ಆಸ್ತಿ ನಿಮ್ಮ ಕುಟುಂಬಕ್ಕೂ ಪಿತ್ರಾರ್ಜಿತವಾಗಿ ಉಳಿಯಲಿಲ್ಲ: ಇಬ್ಬರ ಹೆಸರಿಗೂ ಕ್ರಯಪತ್ರವಾಗಲಿಲ್ಲ; ನಿನ್ನಣ್ಣನಿಗೆ ಸ್ವಯಾರ್ಜಿತವಾಗಿಯಿತು. ಮನೆಗೆ ಯಜಮಾನ ಅವನು. ನಿನ್ನ ಹೆಸರಿಗೆ ಕ್ರಯಪತ್ರವಾಗಿದ್ದರೆ ಏನಾಗುತಿತ್ತು? ಹಣ ಅವನರ್ಧಕೊಟ್ಟಿದ್ದಾನೆ; ನೀನರ್ಧಕೊಟ್ಟಿರುವೆ. ನಿನ್ನ ಅಣ್ಣನಿಗೆ ನಿನ್ನ ಮೇಲೆ ನಂಬಿಕೆ ಇಲ್ಲದಿರುವಾಗ ಇನ್ನು ನಮ್ಮ ಹಣಕ್ಕೆ ಖಾತರಿಯೆನು?"

ಇವೆಲ್ಲ ಕಾನೂನಿನ ಮಾತು. ಕಾನೂನಿಗೆ ಪ್ರತ್ಯಕ್ಷ ಪ್ರಮಾಣಗಳಿರಬೇಕು. ನಂಬಿಕೆ ಕೇವಲ ನಂಬಿಕೆ, ಅದಕ್ಕೆ ಆಧಾರವಿರುವುದಿಲ್ಲ. ಆದ್ದರಿಂದ ಗುರಪ್ಪಗೌಡ ತಲೆ ತಗ್ಗಿಸಿಕೊಂಡು ಬಸಪ್ಪಗೌಡರ ಮಾತನ್ನೆಲ್ಲ ಕೇಳಿದ. ಮನೆಗೆ ಹಿಂತಿರುಗಿ ಬರುವಾಗ ದಾರಿಯ ಮೇಲೆ ಗುರಪ್ಪಗೌಡ ಅಂದುಕೊಂಡ—ಇಬ್ಬರ ಹೆಸರಿಗೂ ಕ್ರಯಪತ್ರವಾಗಬಹುದಿತ್ತು, ಆದರೆ ಅಣ್ಣಯ್ಯ ಹಾಗೆ ಮಾಡಲಿಲ್ಲ.

ಎರಡು ತಿಂಗಳು ಕಳೆದವು. ಅಣ್ಣೀವುಕ್ಕಿಯಲ್ಲಿ ಯಾವ ತರದ ಬದಲಾವಣೆಯೂ ಕಾಣ ಬರಲಿಲ್ಲ. ಇಂದಲ್ಲ ನಾಳೆಯಾದರೂ ತಮ್ಮ ಹಣಕ್ಕೆ ಏನಾದರೊಂದು ವ್ಯವಸ್ಥೆಯಾಗುವುದೆಂದು ನೆನಸಿದ್ದ ಸಾಹುಕಾರರಿಗೂ ಸರಿಯಾದ ಉತ್ತರ ಸಿಗಲಿಲ್ಲ. ಎರಡು ಕಡೆ ಸಾಲವಿರುವುದು ಸಾಹುಕಾರರಿಬ್ಬರಿಗೂ ಗೊತ್ತು. ತಮ್ಮ ಹಣಕ್ಕೆ ನಾಳೆ ಯಾವ ತೊಂದರೆಯೋ ಎಂದು ಇಬ್ಬರಿಗೂ ಭಯ. ಸಾಲದ ವಿಷಯದಲ್ಲಿ ಸುಮ್ಮನಿರುವುದನ್ನು ನೋಡಿ ಬಸಪ್ಪಗೌಡರು ತಮ್ಮಲ್ಲಿಗೆ ಗುರಪ್ಪನನ್ನು ಕರೆದು ಹೇಳಿದರು, "ಜಮೀನನ್ನು ನಿನ್ನ ಹೆಸರಿಗೆ ಮಾಡಿಕೊಡಲು ಸುಬ್ಬಯ್ಯ ಏನು ಹೇಳಿದ ?"

ತಲೆ ತಗ್ಗಿಸಿಕೊಂಡು, ಅಪರಾಧಿಯಂತೆ ಗುರಪ್ಪಗೌಡ ಹೇಳಿದ, "ಆ ವಿಚಾರ ನಾನು ಪ್ರಸ್ತಾಪ ಮಾಡಲಿಲ್ಲ. ಹಾಗೇನಾದರೂ ಹೇಳಿದರೆ ನಮ್ಮಲ್ಲಿ ಜಗಳ ಪ್ರಾರಂಭವಾಗುತ್ತದೆ."

"ಹಾಗಾದರೆ ಒಂದು ಉಪಾಯ ಮಾಡು. ಎಲ್ಲಾ ಸಾಲ ನಾನು ಹಾಕಿಕೊಳ್ಳುತ್ತೇನೆ, ನನ್ನ ಹೆಸರಿಗೆ ಜಮೀನನ್ನೆಲ್ಲ ಇಬ್ಬರೂ ಬರೆದು ಕೊಡಿ. ಆಗ ನಿನಗೆ ಮೋಸವಾಗುವುದಿಲ್ಲ. ಸಾಲ ತೀರಿದ ಮೇಲೆ ಇಬ್ಬರ ಹೆಸರಿಗೂ ಜಮೀನನ್ನು ಬರೆದು ಕೊಡುತ್ತೇನೆ."

ಇದಕ್ಕೆ ಎದುರುತ್ತರ ಕೊಡುವ ಬುದ್ಧಿ ಗುರಪ್ಪನಿಗಿರಲಿಲ್ಲ. ಆದ್ದರಿಂದ ಮನೆಗೆ ಹೋದ ಕೂಡಲೆ ಗುರಪ್ಪಗೌಡ ವಿಚಾರವನ್ನು ಅಣ್ಣನ ಮುಂದೆ ಎತ್ತಿದ, ಬಸಪ್ಪಗೌಡರು ಹಣಕ್ಕೆ ತಗಾಯಿದೆ ಮಾಡುತ್ತಾರೆ, ಅವರಿಗೆ ಯಾವುದಾದರೊಂದು ರೀತಿಯಲ್ಲಿ ಸಮಾಧಾನ ಹೇಳಬೇಕಾಗಿದೆ."

ಸುಬ್ಬಯ್ಯಗೌಡ ಸ್ವಲ್ಪಹೊತ್ತು ಮೌನವಾಗಿದ್ದು ತರುವಾಯ ಹೇಳಿದ, "ನಾನು ಸಾಲ ತಂದ ಅಪ್ಪಯ್ಯಗೌಡರೂ ಹಾಗೆಯೇ ಎರಡು ಮೂರು ಸಾರಿ ಜನ ಕಳುಹಿಸಿದ್ದರು. ಅವರಿಗೂ ಯಾವುದಾದರೊಂದು ರೀತಿಯಲ್ಲಿ ಉತ್ತರ ಕೊಡಬೇಕು. ಒಂದು ವೇಳೆ ಕೈಗೆ ಸಿಗಲಿ, ಒಬ್ಬರ ಸಾಲವನ್ನಾದರೂ ತೀರಿಸೋಣವೆಂದು ನೆನಸಿದ್ದೆ. ಬೆಳೆ ಬಂದರೂ ಕೈ ಖಾಲಿ. ನಾವೊಂದು ಯೋಚಿಸಿದರೆ ಅದೊಂದಾಗುತ್ತಿದೆ."

ವ್ಯವಹಾರವನ್ನರಿಯದ, ಕತ್ತೆಯಂತೆ ದುಡಿಯುವುದನ್ನೇ ಬಲ್ಲ ಗುರಪ್ಪಗೌಡ ಉಪಾಯ ಹೇಳಿದ "ಜಮೀನನ್ನೆಲ್ಲ ಬರೆದುಕೊಟ್ಟರೆ ತಾನೆ ಎಲ್ಲಾ ಸಾಲವನ್ನು ಹಾಕಿಕೊಳ್ಳುವುದಾಗಿ ಬಸಪ್ಪಗೌಡರು ಹೇಳಿದರು. ಹಾಗೇ ಮಾಡಬಹುದಲ್ಲ ?"

ವ್ಯವಹಾರದಲ್ಲಿ ಗುರಪ್ಪಗೌಡನಿಗಿಂತಲೂ ಹೆಚ್ಚು ನುರಿತ, ಅನೇಕ ತರದ ಜನರೊಂದಿಗೆ ಬೆರೆತ ಸುಬ್ಬಯ್ಯಗೌಡನಿಗೆ ಈ ಮಾತಿನ ಕಾವು ತಾಗಿತು. ಅದನ್ನು ತೋರ್ಪಡಿಸದೆ ನಕ್ಕು ಹೇಳಿದ, "ಹಾವನ್ನು ಹೊಡೆದು ಹದ್ದಿನ ಮುಂದೆ ಹಾಕಿದ ಹಾಗಾಗುತ್ತದೆ. ಶಂಕರಪ್ಪಗೌಡರ ಕಾಲನ್ನೇ ಕಟ್ಟಿಕೊಂಡಿದ್ದರೆ ಸ್ವಲ್ಪ ರಿಯಾಯಿತಿ ತೋರಿಸಿ ಉಳಿಸುತ್ತಿದ್ದರು. ನಾಲ್ಕು ಕಾಲದಿಂದ ಅವರಲ್ಲಿ ಲೇವಾದೇವಿ ನಡೆದು ಬಂದಿತ್ತು, ಮತ್ತು ನಮ್ಮ ತಂದೆ ಒಳ್ಳೆಯವರೆಂದು ನೋಡಿಯೇ ಅವರ ಹತ್ತಿರ ಸಾಲ ಮಾಡಿದ್ದರು. ನಾವು ಗೇಣಿ ಬರೆದು ಕೊಡಲಾರದ ಅಹಂಕಾರಕ್ಕೆ ಇಷ್ಟೊಂದು ಅನರ್ಥ ಮಾಡಿಕೊಂಡೆವು. ಶಂಕರಪ್ಪಗೌಡರ ಹತ್ತಿರವೇ ಇನ್ನು ನಾಲ್ಕು ಕಾಲ ಲೇವಾದೇವಿ ನಡೆಸಿ ಕೈಯಲ್ಲಿ ಸ್ವಲ್ಪ ದುಡ್ಡನ್ನು ಮಾಡಿಕೊಂಡು ಪ್ರಯತ್ನ ಪಟ್ಟಿದ್ದರೆ, ನಾಲ್ಕು ಕಾಲ ಲೇವಾದೇವಿ ನಡೆದು ಬಂದಿದ್ದ ಕಾರಣ ಸ್ವಲ್ಪ ಅನುಕೂಲ ಮಾಡಿಕೊಡುವಂತೆ ಕೇಳಬಹುದಿತ್ತು. ಇಲ್ಲಿ ಇಬ್ಬರ ಹತ್ತಿರ ಬೇರೆ ಬೇರೆ ಸಾಲ ಮಾಡಿದ್ದೇವೆ. ಇಬ್ಬರೂ ಜಮೀನು ತಮ್ಮ ಹೆಸರಿಗಾಗಲಿ ಎಂದು ತವಕಪಡುತ್ತಿದ್ದಾರೆ."

ಇಷ್ಟು ದೊಡ್ಡ ವ್ಯಾಖ್ಯಾನ ಗುರಪ್ಪಗೌಡನಿಗೆ ಅರ್ಧಂಬರ್ಧ ತಿಳಿಯಿತು. ಅದನ್ನೂ ತನಗೆ ವಿರುದ್ಧವಾಗಿ ಅರ್ಥಮಾಡಿಕೊಂಡು ಹೇಳಿದ, "ಬಸಪ್ಪಗೌಡರಿಗೆ ಅರ್ಧ ಆಸ್ತಿ, ಅಪ್ಪಯ್ಯಗೌಡರಿಗೆ ಅರ್ಧ ಆಸ್ತಿ ಬರೆದು ಕೊಡಬಹುದು."

ತಮ್ಮನ ಕಡೆ ನೋಡಿ ಸುಬ್ಬಯ್ಯಗೌಡ ಹೇಳಿದ, "ಅದನ್ನೇ ಇಷ್ಟೊತ್ತು ನಾನು ಹೇಳಿದ್ದು. ಇಬ್ಬರಿಗೆ ಬರೆದು ಕೊಡುವ ಬದಲು ಮೊದಲು ಒಂದೇಕಡೆ ಅನುಕೂಲವಾದ ಸ್ಥಳದಲ್ಲಿತ್ತು. ಇಬ್ಬರಿಗೂ ಬರೆದು ಕೊಡುವುದರ ಅರ್ಥ ನಾವಿಬ್ಬರೂ ಹಿಸ್ಸೆಯಾದ ಹಾಗಾಯಿತು. ಇರುವ

ಈ ಆಸ್ತಿ ಒಟ್ಟುಕುಟುಂಬದ ಜೀವನಕ್ಕೆ ಸಾಲದು. ಇನ್ನು ಹಿಸ್ಸೆಯಾದರೆ ಒಂದು ಪಾಲಿನವರೂ ಬದುಕುವ ಹಾಗಿಲ್ಲ."

"ಇಬ್ಬರಿಗೆ ಬರೆದುಕೊಟ್ಟರೆ ಹಿಸ್ಸೆ ಆದಹಾಗೆ ಹೇಗಾಗುತ್ತದೆ?"

"ಅದಕ್ಕಿಂತ ಒಬ್ಬರಿಗೆ ಬರೆದುಕೊಡುವುದು ಪರಮಸುಖ, ಅಪ್ಪಯ್ಯ ಗೌಡರ ಹತ್ತಿರ ಮಾತನಾಡುತ್ತೇನೆ."

ಗುರಪ್ಪಗೌಡನಿಗೆ ಗಾಬರಿಯುಂಟಾಯಿತು. ಸ್ವಲ್ಪ ಉದ್ವೇಗದಲ್ಲಿ ಹೇಳಿದ, "ಬಸಪ್ಪಗೌಡರಿಗೆ ಬರೆದುಕೊಡಬಹುದು, ಅವರೇ ಎಲ್ಲ ಸಾಲ ಹಾಕಿಕೊಳ್ಳುತ್ತಾರಂತಲ್ಲ."

"ಆಪ್ಪಯ್ಯಗೌಡರ ಹತ್ತಿರ ಜಮೀನನ್ನು ಬರೆದುಕೊಡುವ ವಿಚಾರ ಮಾತನಾಡಲು ಹೋಗುವುದಿಲ್ಲ. ಯಾರಿಗೆ ಆಗಲಿ ಬರೆದುಕೊಡುವುದ ಕ್ಕೋಸ್ಕರ ನಾವು ಇಷ್ಟು ಕಷ್ಟಪಡಬೇಕಾಗಿರಲಿಲ್ಲ. ವರ್ಷ ವರ್ಷವೂ ಬೆಳೆದ ಪೈರನ್ನು ಕೊಡುವ ಮೂಲಕ ಸಾಲ ತೆಗೆದುಕೊಳ್ಳಲು ಒಪ್ಪಿದರೆ ಅವರಿಗೇ ಎರಡು ಕಡೆಯ ಸಾಲವನ್ನೂ ಹಾಕಿಕೊಳ್ಳಲು ಹೇಳಬಹುದು."

ಈ ಸಲಹೆ ಗುರಪ್ಪಗೌಡನನ್ನು ಸೋಲಿಸಿತು. ಇದಕ್ಕೆ ಬಸಪ್ಪ ಗೌಡರು ಒಪ್ಪುವರೋ ಇಲ್ಲವೋ ತಿಳಿಯದು. ಆದ್ದರಿಂದ ಗುರಪ್ಪಗೌಡ ಸುಮ್ಮನಾದ.

ಅಧಿಕಾರ, ಯಜಮಾನಿಕೆಯ ಲಾಲಸೆ ಸಣ್ಣ ಕುಟುಂಬದಿಂದ ಹಿಡಿದು ದೊಡ್ಡ ಸಾಮ್ರಾಜ್ಯದ ತುದಿಯ ಮೇಲೆ ಕುಳಿತು—ಪ್ರಜೆಗಳ ಸುಖವೇ ನನ್ನ ಸುಖ, ಪ್ರಜೆಗಳ ಸೇವೆಯೇ ನನ್ನ ಸಾಮ್ರಾಜ್ಯದ ಗುರಿ ಎಂದು ಹೇಳುವ ಸಾಮ್ರಾಟನವರೆಗಿರುತ್ತದೆ. ಇದಕ್ಕೆ ಅಣ್ಣತಮ್ಮ, ಗಂಡಹೆಂಡತಿ, ತಂದೆಮಗ, ರಾಜಾಪ್ರಜಾ ಎಂಬ ತಾರತಮ್ಯವಿಲ್ಲ. ಸಂಬಂಧ ಭೇದದಿಂದ ಆಚರಣೆಯಲ್ಲಿ ವ್ಯತ್ಯಾಸ ಕಂಡುಬಂದರೂ ಬುಡದಲ್ಲಿ ಅವೊಂದೇ ಶಕ್ತಿ ಪ್ರಬಲವಾಗಿ ಕೆಲಸಮಾಡುತ್ತಿರುತ್ತದೆ. ಇದಕ್ಕೆ ವಿರುದ್ಧ, ತ್ಯಾಗಬುದ್ಧಿ ತಲೆದೋರಿದ್ದಲ್ಲಿ ಅಧಿಕಾರ, ಯಜಮಾನಿಕೆಯ ಕೊಂಡಿ ಮುರಿದು ವಿಶ್ವಾಸ ಬೆಳೆಯುತ್ತದೆ. ನಂಬಿಕೆ ತಾನೇತಾನಾಗಿ ಬೆಳೆದು ಸುಖಶಾಂತಿಗಳನ್ನು ತರುವುದು. ಅದು ವಿನಾ ಉಳಿದ ಶಬ್ದಪ್ರಯೋಗ ಗಳು ಕೇವಲ ವ್ಯವಹಾರದ ಆಡಂಭರ.

ಅಧಿಕಾರದಲ್ಲಿರುವ ವ್ಯಕ್ತಿ ತನ್ನ ಶರೀರದ ಅಂತ್ಯ ರಕ್ತಬಿಂದುವಿರುವ ವರೆಗೂ ಅದನ್ನು ಕಾಪಾಡುತ್ತಾನೆ. ಅವನು ಸೋತಾಗ ಪ್ರತಿಕಕ್ಷಿ ಬಲ ತ್ಕಾರದಿಂದ ಕಿತ್ತುಕೊಳ್ಳಬೇಕು. ಯಜಮಾನಿಕೆ ಅಥವಾ ಅಧಿಕಾರ ಸ್ಥಾನಗೌರವವನ್ನು ಕಾಪಾಡುವುದರಿಂದ ಆ ಸ್ಥಾನದಲ್ಲಿರುವವರೂ ಅವು ಗಳ ರಕ್ಷಣೆಯಲ್ಲಿ ತತ್ಪರರಾಗಿರುತ್ತಾರೆ.

ಸುಬ್ಬಯ್ಯಗೌಡ ಯಜಮಾನ, ಅಣ್ಣೀಮಕ್ಕಿಯ ಆಸ್ತಿ ಅವನ ಹೆಸರಿ ನಲ್ಲಿದೆ. ಅವನಿಗೆ ಬೇಕಾದ್ದು ಅದರ ರಕ್ಷಣೆ. ಅದರಲ್ಲಿ ಒಂದು ಸಾಸುವೆ ಕಾಳಿನಷ್ಟು ಭಾಗ ಗುರಪ್ಪಗೌಡನಿಗೆ ಹೋಗುವುದೆಂದರೆ ಅವನ ಯಜ ಮಾನಿಕೆ ಮುಕ್ಕಾಗುವುದು. ಸುಬ್ಬಯ್ಯಗೌಡ ಅದನ್ನೇಕೆ ಒಪ್ಪುವನು ?

ತಿರುಗಿ ಬಸಪ್ಪಗೌಡರ ಭೇಟಿಯಾದಾಗ ಗುರಪ್ಪಗೌಡ ತಮ್ಮಲ್ಲಿ ನಡೆದ ಮಾತುಕಥೆಯನ್ನು ವಿಸ್ತಾರವಾಗಿ ವಿವರಿಸಿದ. ಅವನ ಅವಿವೇಕದ ಮಾತನ್ನು ಕೇಳಿ ಬಸಪ್ಪಗೌಡರು ಹೇಳಿದರು, "ವರ್ಷವರ್ಷವೂ ಸರಿ ಯಾಗಿ ಬಡ್ಡಿಯನ್ನೂ ಅಸಲಿನಲ್ಲಿ ನಿಶ್ಚಿತವಾದ ಅಂಶವನ್ನೂ ಕೊಡುತ್ತಾ ಬನ್ನಿ, ಅಪ್ಪಯ್ಯಗೌಡರ ಹತ್ತಿರವಿರುವ ಸಾಲವನ್ನೂ ನಾನೇ ಹಾಕಿ ಕೊಳ್ಳುತ್ತೇನೆ."

ಗುರಪ್ಪಗೌಡನಿಗೆ ಸಂತೋಷವಾಯಿತು.

ಬಂದವನೇ ಅಣ್ಣನೊಂದಿಗೆ ಮಾತು ತೆಗೆದ, "ಅಪ್ಪಯ್ಯಗೌಡರ ಹತ್ತಿರ ಹೋಗಿದ್ದೆಯಾ ? ಅವರೇನು ಹೇಳಿದರು ?"

ಒಂದೇ ಮಾತಿನಲ್ಲಿ ಸುಬ್ಬಯ್ಯಗೌಡ ಹೇಳಿದ, "ಹೋಗಲಿಲ್ಲ"

ಗುರಪ್ಪಗೌಡನಿಗೆ ಸಂತೋಷವಾಯಿತು, ಹೇಳಿದ, "ಬಸಪ್ಪಗೌಡ ರನ್ನು ನಾನು ನೋಡಿದ್ದೆ. ಸರಿಯಾಗಿ ಬಡ್ಡಿಗೂ ಸ್ವಲ್ಪ ಅಸಲಿಗೂ ವರ್ಷ ವರ್ಷವೂ ಬೆಳೆದ ಬೆಳೆಯನ್ನು ವಸೂಲು ಕಟ್ಟುತ್ತಾ ಬಂದರೆ ಅವರೇ ಅಪ್ಪಯ್ಯಗೌಡರ ಸಾಲವನ್ನೂ ಹಾಕಿಕೊಳ್ಳುತ್ತಾರಂತೆ."

ತಕ್ಷಣ ಸುಬ್ಬಣ್ಣಗೌಡ ಕೇಳಿದ, "ಬಡ್ಡಿ ಹೇಗೆ ಹಾಕುತ್ತಾರಂತೆ ?"

"ಹದಿನೈದು ರೂಪಾಯಿ."

"ಬಂದ ಉತ್ಪತ್ತಿ ಬಡ್ಡಿಗೆ ಸಂದಾಯವಾದರೆ, ಅಸಲನ್ನು ಹೇಗೆ ತೀರಿಸುವುದು ? ನಮ್ಮ ಜೀವನ ಹೇಗೆ ನಡೆಯುತ್ತದೆ ?"

"ಅಪ್ಪಯ್ಯಗೌಡರು ಬಡ್ಡಿಯನ್ನು ಹೇಗೆ ಹಾಕುತ್ತಾರಂತೆ?"

"ಖಾತರಿ ಬಗ್ಗೆ ಏನೂ ಕೊಡದೆ ಹೋದರೆ ಅವರೂ ಇಷ್ಟೇ ಕೇಳ ಬಹುದು. ನಾನು ಅವನನ್ನು ವಿಚಾರಿಸಲಿಲ್ಲ."

"ಹಾಗಿದ್ದ ಮೇಲೆ ಬಸಪ್ಪಗೌಡರ ಹತ್ತಿರ ಲೇವಾದೇವಿ ಬೆಳೆಸ ಬಹುದಲ್ಲ."

"ಬೆಳಸಬಹುದು; ಬಡ್ಡಿ ಯಾರ ಹತ್ತಿರವಾದರೂ ಅಷ್ಟು ಸಾಧ್ಯವಿಲ್ಲ."

ಪ್ರತಿಯೊಂದಕ್ಕೂ ಎಷ್ಟು ವಿಘ್ನ? ಇಷ್ಟು ಪ್ರಯತ್ನ ನಡೆಯುತ್ತಿರು ವುದು ಅಣ್ಣನೆಲ್ಲಿಯಾದರೂ ಮೋಸಮಾಡಬಹುದೆಂಬ ಖಾತರಿಯ ಬಗ್ಗೆ. ಅಣ್ಣನೊಂದಿಗೆ ಮಾತನಾಡುವಾಗ ಬಸಪ್ಪಗೌಡರು, ಅಪ್ಪಯ್ಯಗೌಡರು ಮೋಸಗಾರರೆಂದು ಗುರಪ್ಪಗೌಡನಿಗನಿಸುವುದು. ಬಸಪ್ಪಗೌಡರೊಂದಿಗೆ ಮಾತನಾಡುವಾಗ ತನ್ನ ಅಣ್ಣ ಖಂಡಿತ ಮೋಸಮಾಡುವನೆಂದು ತೋರು ವುದು. ಗುರಪ್ಪಗೌಡನಿಗೆ ಯಾವುದು ಸರಿ? ಯಾವುದು ತಪ್ಪು ಎಂದು ನಿರ್ಧರಿಸುವುದು ಕಷ್ಟವಾಯಿತು. ಸಾಲ ಯಾರ ಹತ್ತಿರವಿದ್ದರೂ ಜಮೀ ನಿನ ಕ್ರಯಪತ್ರ ತನ್ನ ಹೆಸರಿನಲ್ಲಿದ್ದರೆ ಅದು ಖಾತರಿ ಎಂಬುದೊಂದು ಮಾತು ಅವನ ಮನಸ್ಸಿನಲ್ಲಿ ಗಟ್ಟಿಯಾಗಿ ಬೇರೂರಿತ್ತು. ಬೇರೆ ವಿಚಾರ ಗಳನ್ನು ಬದಿಗೆ ತಳ್ಳಿ ಮನಸ್ಸನ್ನು ಬಿಗಿಹಿಡಿದು ಕೇಳಿದ, "ಅರ್ಧ ಜಮೀನು ನನ್ನ ಹೆಸರಿಗೆ ಕ್ರಯವಾಗಿರಲಿ, ಅರ್ಧ ನಿನ್ನ ಹೆಸರಿನಲ್ಲಿರಲಿ."

ಹಳೆಯ ಶಬ್ದ ಹೊಸ ಅರ್ಥದಲ್ಲಿ ಉಪಯೋಗಿಸಿದ ಹಾಗೆ.

ಈ ಅರ್ಥದ ಮಾತನ್ನು ಹಿಂದೆ ಸುಬ್ಬಯ್ಯಗೌಡನೇ ಉಪಯೋಗಿಸಿದ್ದ. ತಿರುಗಿ ಅದೇಮಾತು ಇಂದು ಗುರಪ್ಪಗೌಡನ ಬಾಯಿಂದ ಬಂತು. ಹಿಂದೆ ಅಣ್ಣ ಉಪಯೋಗಿಸಿದ ಸಂದರ್ಭದಲ್ಲಿ ಅದಕ್ಕೆ ಒಂದೇ ಅರ್ಥವಿತ್ತು. ಪಾತ್ರ ವಿಶೇಷದಿಂದ ಈಗ ಅದಕ್ಕೆ ಅನೇಕ ಅರ್ಥಗಳಾದವು. ಅದನ್ನೆಲ್ಲ ಯೋಚಿಸಿ ಬುಡಭದ್ರತೆಗಾಗಿ ಸುಬ್ಬಯ್ಯ ಹೇಳಿದ, "ಪ್ರಪಂಚದಲ್ಲಿ ಜಮೀನು, ಮನೆ ಯಾವಾಗಲೂ ಹಿರಿಯವರ ಹೆಸರಿನಲ್ಲಿರುವುದು ಪದ್ಧತಿ. ಒಂದೇ ಮನೆ ಯಲ್ಲಿ ಇಬ್ಬರ ಹೆಸರಿಗಿರುವುದು ಮನೆತನಕ್ಕೆ ಒಳ್ಳೆಯದಲ್ಲ. ಯಾರ ಹೆಸರಿನಲ್ಲಿ ಜಮೀನಿದ್ದರೇನು? ಯಾರಾದರು ಅದನ್ನು ತೆಗೆದುಕೊಂಡು ಹೋಗುತ್ತಾರೆಯೇ?"

"ಹಾಗಾದರೆ ಶಂಕರಪ್ಪಗೌಡರಿಂದ ಬಿಡಿಸಿಕೊಂಡಿದ್ದೇಕೆ?"

"ಜಮೀನನ್ನು ತಮ್ಮದನ್ನಾಗಿ ಮಾಡಿಕೊಳ್ಳಲು ನಮ್ಮಿಂದ ಗೇಣಿ ಚೀಟಿ ಕೇಳಿದರು ಅದಕ್ಕೊಪ್ಪಿಸ್ಯಾರ?"

"ಪಿತ್ರಾರ್ಜಿತವಾಗಿ ನಡೆದುಕೊಂಡು ಬಂದಿದ್ದರೆ ಸರಿ, ನಿನ್ನ ಹೆಸರಿಗೆ ಜಮೀನಾಗಿರುವುದರಿಂದ, ನಿನ್ನ ಸ್ವಯಾರ್ಜಿತವೆಂದಾಗುವುದು."

"ನಿನಗೆ ಯಾರೋ ಕಿವಿಯೂದಿರಬೇಕು. ಒಂದೇ ಮನೆಯಲ್ಲಿ ಒಟ್ಟಿಗೆ ವಾಸವಾಗಿದ್ದ ಮೇಲೆ ಸ್ವಯಾರ್ಜಿತ ಹೇಗೆ?"

ಕಾಯಿದೆ, ಕಾನೂನು ಕರತಲಾಮಲಕನಾಗಿರುವ ಪಂಡಿತರೇ ಒಂದೇ ವಸ್ತುವನ್ನಾಗಲಿ, ವಿಚಾರವನ್ನಾಗಲಿ ಎರಡು ದೃಷ್ಟಿಯಿಂದ ನೋಡುತ್ತಾರೆ; ಕೊನೆಯವರೆಗೂ ತಮ್ಮ ದೃಷ್ಟಿಯನ್ನೇ ಸಾಧಿಸುತ್ತಾರೆ. ನಿಜವಾಗಿಯೂ ಕಾಯಿದೆ, ಕಾನೂನುಗಳ ಸ್ವರೂಪ ಹಾಗೆಯೇ. ಆದ್ದರಿಂದ ಇಬ್ಬರೂ ಮೂರನೆಯ ವ್ಯಕ್ತಿಯ ಹತ್ತಿರ ನಿರ್ಣಯಕ್ಕೆ ಹೋಗುತ್ತಾರೆ. ಆ ಮೂರನೆಯ ವ್ಯಕ್ತಿಯನ್ನು ನ್ಯಾಯಾಧಿಪತಿ ಎನ್ನುತ್ತಾರೆ. ಅವನ ಹತ್ತಿರವಿರುವ ನ್ಯಾಯದ ಗಜಕಡ್ಡಿ ಎಂದರೆ ರಾಜದಂಡ. ಎರಡು ಪಕ್ಷದವರ ವಾದವನ್ನು ಕೇಳಿ ತನಗೆ ತಿಳಿದ ನಿರ್ಣಯವನ್ನು ಮಾಡುತ್ತಾನೆ. ಅವನ ನಿರ್ಣಯವೇ ಸತ್ಯದ ಸ್ವರೂಪವಲ್ಲ. ಇಬ್ಬರಿಗೆ ಮತಭೇದ ಬಂದಾಗ ಒಂದು ನಿರ್ಣಯಕ್ಕೆ ಬರುವುದು ಸಭ್ಯತೆಯ ಲಕ್ಷಣ. ಅದರಲ್ಲಿ ಒಬ್ಬನಿಗೆ ಅನುಕೂಲ ಇನ್ನೊಬ್ಬನಿಗೆ ಅನಾನುಕೂಲವಾಗುವುದು ಸಹಜ. ಅನ್ಯಾಯವಾದವನು ವಿರೋಧಿಸುವ ಹಾಗಿಲ್ಲ. ನ್ಯಾಯಾಧಿಪತಿಯ ನ್ಯಾಯದ ಹಿಂದೆ ಪೋಲೀಸು ಸೇನೆ ಇರುತ್ತದೆ. ನ್ಯಾಯದ ಗತಿ ಹೀಗಿರುವಾಗ ಮಂದಮತಿಯ ಗುರಪ್ಪಗೌಡನಿಗೆ ಅದರ ರಹಸ್ಯ ತಿಳಿಯುವ ಬಗೆಹೇಗೆ? ಆದ್ದರಿಂದ ಅಣ್ಣನ ಮುಂದೆ ಒಪ್ಪಿಕೊಂಡು ಬಸಪ್ಪಗೌಡರ ಮುಂದೆ ತಿರುಗಿ ಸೋತ. ಬಸಪ್ಪಗೌಡರು ಹೇಳಿದರು, "ನೀನಿನ್ನು ಹುಡುಗ; ಪ್ರಪಂಚದಲ್ಲಿ ನಿನಗೆ ಏಟು ತಾಗಲಿಲ್ಲ ಒಂದೇ ನಿನಗೆ ಬುದ್ಧಿಯಿರಬೇಕು, ಇಲ್ಲವೇ ಹೇಳಿದವರ ಮಾತನ್ನು ಕೇಳಬೇಕು. ಅಣ್ಣತಮ್ಮ ಚೆನ್ನಾಗಿರುವ ವರೆಗೆ ಸುಬ್ಬಯ್ಯಗೌಡ ಹೇಳುವುದು ನಿಜ. ತಂದೆಮಗ, ಗಂಡಹೆಂಡತಿಗೆ ಮನಸ್ತಾಪ ಬರುವ ಕಾಲದಲ್ಲಿ ನಾಳೆ ನಿಮ್ಮಲ್ಲಿ ಮನಸ್ತಾಪ ಹುಟ್ಟುವುದು

ದೊಡ್ಡ ಮಾತಲ್ಲ; ಆಗ ನೀನೇನುಮಾಡುವಿ? ಆಗಲುವ ಹಲ್ಲನ್ನು ಕಿತ್ತಿಸೆಯುವಂತೆ ನಿನ್ನನ್ನು ಹೊರಗೆ ಹಾಕಿದರೇನುಮಾಡುವಿ?"

ಅತ್ಯಂತ ಉತ್ಸಾಹದಿಂದ ಗುರಪ್ಪಗೌಡ ಹೇಳಿದ, "ನಾವಿಬ್ಬರೂ ಒಟ್ಟಿಗಿದ್ದೆವಲ್ಲ! ಅದಕ್ಕಿಂತ ಇನ್ನೇನು ಬೇಕು?"

"ನಿನ್ನ ಮಾತು ಕೇಳಿ ನಗುಬರುತ್ತದೆ. ನಿಮ್ಮ ಮನೆಯಲ್ಲಿ ಕೆಲಸಕ್ಕಿದ್ದಾನಲ್ಲ ನಾಗಯ್ಯ ಅವನಿರುತ್ತಾ ಎಷ್ಟು ವರ್ಷವಾಯಿತು."

"ಬಹಳ ವರ್ಷವಾಯಿತು. ನನಗೆ ಬುದ್ಧಿಬರುವುದಕ್ಕಿಂತ ಮುಂಚೆಯಿಂದಲೂ ಇದ್ದಾನೆ."

"ನಾಳೆ ಅವನೂ ಒಂದು ಹಿಸ್ಸೆ ಕೇಳಿದರೆ ಏನುಮಾಡುವಿರಿ?"

"ಅವನು ಕೆಲಸಮಾಡುವವನು, ಅವನೇಕೆ ಕೇಳುವನು?"

"ನೀನಾರು?"

"ನಾವು ಅಣ್ಣತಮ್ಮ."

"ಸಂಬಂಧವಾಯಿತು."

"ಆಸ್ತಿಗೂ ಹಾಗೆಯೇ."

"ಆಸ್ತಿಗೆ ಹಾಗಲ್ಲ. ನಿನ್ನ ಅಣ್ಣ ಸಂಪಾದಿಸಿದುದು."

"ಒಟ್ಟು ಕುಟುಂಬದಲ್ಲಿ ಹಣವೆಲ್ಲಿಂದ ಬಂತು?"

"ಎಂಥ ಒಟ್ಟು ಕುಟುಂಬ? ಹಿಸ್ಸೆಯಾಗುವುದಕ್ಕೆ ಆಸ್ತಿ ಎಲ್ಲಿದೆ?"

"ಈಗ ನಾವು ರೂಢಿಸುತ್ತಿರುವುದು;"

"ತಿರುಗಿ ಅದೇ ಮಾತು. ಅದಕ್ಕೆ ಆಧಾರವೇನು? ನಾಳೆ ನಿನ್ನ ಅಣ್ಣ ಹೇಳುತ್ತಾನೆ—ನನ್ನ ಹೆಂಡತಿಯ ಹತ್ತಿರ ಆಕೆಯ ತಂದೆ ಕೊಟ್ಟ ಹಣವಿತ್ತು. ಅದರಿಂದಿ ಈ ಜಮೀನನ್ನು ಕೊಂಡುಕೊಂಡೆ. ಇವನು ನನ್ನ ತಮ್ಮ ಹೌದು. ನಮ್ಮಲ್ಲಿಯೇ ಊಟಮಾಟಕೊಂಡಿದ್ದಾನೆ."

ಊರೆಲ್ಲ ಹಾಳಾಗಿದೆಯೆ?"

"ನಿಮ್ಮ ಅಣ್ಣತಮ್ಮನ ವ್ಯವಹಾರ ಊರಿನವರಿಗೆಲ್ಲ ಹೇಗೆ ಗೊತ್ತಿರುತ್ತದೆ? ನೀವು ಅಣ್ಣತಮ್ಮ ಹೌದು; ಅದನ್ನು ನಿನ್ನ ಅಣ್ಣ ಒಪ್ಪಿಕೊಳ್ಳುತ್ತಾನೆ. ಅದರಿಂದ ನಿನಗೆ ಬಂದ ಭಾಗ್ಯವೇನು? ದಾಖಲೆ, ಲೆಕ್ಕಪತ್ರವೆಲ್ಲ ಅವನ ಹೆಸರಿನಲ್ಲಿರುತ್ತದೆ. ನಾಗಯ್ಯನ ಹಾಗೆ ನೀನೂ ಒಬ್ಬ."

ನಾನು, ನಾಗಯ್ಯ ಇಬ್ಬರೂ ಒಂದೇ! ನನ್ನ ಅಣ್ಣನ ಮನಸ್ಸಿನಲ್ಲಿ ಏನೋ ಹುಳ ಕಿರಬೇಕು! ಇಲ್ಲದಿದ್ದರೆ ನನ್ನ ಹೆಸರಿಗೆ ಅರ್ಧ ಆಸ್ತಿ ಮಾಡಿಕೊಡುವುದೇತಕ್ಕೆ ಹಿಂದೆಮುಂದೆ ನೋಡುತ್ತಿರುವುದು! ಎಂದು ಕೊಂಡ ಗುರಪ್ಪಗೌಡ.

ಸಮಯದಲ್ಲಿ ಸಹಾಯಕ್ಕೆಂದು ಗುರಪ್ಪಗೌಡನಿಗೆ ಹಣಕೊಟ್ಟು ಬಸಪ್ಪಗೌಡರು ಸಿಕ್ಕಿಬಿದ್ದಿದ್ದರು. ಹಣಕ್ಕೆ ಯಾವ ಖಾತರಿಯೂ ಇಲ್ಲ. ಯಾವುದಾದರೊಂದು ರೀತಿಯಲ್ಲಿ ತನ್ನ ಹಣವನ್ನು ಹಿಂದಕ್ಕೆ ಪಡೆಯುವ ಚಿಂತೆ ಬಸಪ್ಪಗೌಡರಿಗೆ. ಅದೇ ಯೋಚನೆಯಲ್ಲಿ ಗೌಡರು ಹೇಳಿದರು, "ನಿನ್ನ ಅಣ್ಣ ಬುದ್ಧಿವಂತ, ನೀನು ದಡ್ಡ. ನಿನ್ನನ್ನು ಉಳಿಸುವುದಕ್ಕೆ ಇಷ್ಟೆಲ್ಲ ಪ್ರಯತ್ನಪಟ್ಟೆ, ಸಾಧ್ಯವಾಗಲಿಲ್ಲ. ದೇವರ ಪ್ರೇರೇಪಣೆಯೇ ಹೀಗಿರುವಾಗ ನರಮನುಷ್ಯನ ವಶವೇನಿದೆ. ನಿನ್ನನ್ನು ನಂಬಿ ಹಣಕೊಟ್ಟೆರುವೆನು, ಅದೇರೀತಿ ನನ್ನ ಹಣವನ್ನು ಹಿಂದಕ್ಕೆ ಕೊಡು."

## ನಾಲ್ಕು

ಕ್ಲೇಶ, ದುಃಖಗಳಿಂದೊಡಗೂಡಿ ಗುರಪ್ಪ ಗೌಡ ಬಸಪ್ಪಗೌಡರ ಮನೆಯಿಂದ ಬಂದ. ಸುಬ್ಬಯ್ಯಗೌಡನೂ ಅಪ್ಪಯ್ಯ ಗೌಡರೊಂದಿಗೆ ಮಾತನಾಡಿಕೊಂಡು ಬಂದಿದ್ದರಿಂದ ಅವನೇ ಮೊದಲು ಮಾತನೆತ್ತಿದ. "ಅಪ್ಪಯ್ಯಗೌಡರು ಎಲ್ಲಾಸಾಲವನ್ನು ಹನ್ನೆರಡೂವರೆ ರೂಪಾಯಿಬಡ್ಡಿಗೆ ಹಾಕಿಕೊಳುವುದಾಗೊಪ್ಪಿರುವರು. ಪ್ರತಿವರ್ಷವೂ ಬಡ್ಡಿಯ ಜೊತೆಗೆ ಅಸಲಿಗೂ ಅಲ್ಪ ಸ್ವಲ್ಪ ಕಟ್ಟಬೇಕೆಂದುಮಾತಾಗಿದೆ." ನಾಡಿದ್ದು ಬರಲು ಹೇಳಿದ್ದಾರೆ. ನಾಡಿದ್ದು ಹೋಗಿ ಅವರಿಗೆ ಲೆಕ್ಕ ಪತ್ರ ಮಾಡಿಕೊಟ್ಟು ಬಸಪ್ಪಗಳಡರ ಹಣ ತೀರಿಸೋಣ."

ಗುರಪ್ಪಗೌಡ ಬೇರೆ ರೀತಿಯಲ್ಲಿ ಯೋಚಿಸುತ್ತಿದ್ದುದರಿಂದ ತಕ್ಷಣ ಸುಬ್ಬಯ್ಯಗೌಡನ ಮಾತಿಗೆ ಉತ್ತರ ಕೊಡಲು ಸಾಧ್ಯವಾಗಲಿಲ್ಲ. ಹೆಚ್ಚು ಮಹತ್ವದ್ದಾದರೂ ಸರಳ ರೀತಿಯಲ್ಲಿ ಕೇಳಿದ, ನಾನೂ ಬರಬೇಕೆ?"

ಅಷ್ಟು ಮಹತ್ವಪೂರ್ಣವಾದ ವಿಚಾರವನ್ನು ಗುರಪ್ಪಗೌಡ ಎಷ್ಟು ಸರಳತೆಯಿಂದ ಕೇಳಿದ್ದನೋ ಅದಕ್ಕಿಂತ ಸಂಕ್ಷೇಪದಲ್ಲಿ ಸುಬ್ಬಯ್ಯಗೌಡ ಉತ್ತರ ಹೇಳಿದ, "ಹೌದು."

ಮಾತು ಸಂಕ್ಷೇಪವಾದಷ್ಟು ತೊಡಕು, ವಿಸ್ತಾರವಾದಷ್ಟು ಬೇಸರಿಕೆ ಅಣ್ಣತಮ್ಮಂದಿರ ಮಾತು ಸಂಕ್ಷೇಪವಾದ್ದರಿಂದ ಬಿಡಿಸಲು ಗುರಪ್ಪಗೌಡ ಮೊದಲು ಪ್ರಯತ್ನಪಟ್ಟ, "ಜಮೀನು ನಿನ್ನ ಹೆಸರಿಗಿರುವಾಗ ಬರೆದು ಕೊಡಬೇಕಾದ ಆವಶ್ಯಕತೆ ನನಗೇನಿದೆ?"

"ಜಮೀನು ನನ್ನ ಹೆಸರಿನಲ್ಲಿದರೂ ಅವರಿಗೆ ದೀಡು, ಭೋಗ್ಯ ಮಾಡಿಕೊಡುವುದಿಲ್ಲ. ಖಾತರಿಯ ಬಗ್ಗೆ ಇಬ್ಬರೂ ಬರೆದುಕೊಡಬೇಕಂತೆ?"

"ಪ್ರಪಂಚದಲ್ಲಿ ಸಾಲಮೂಲಗಳಿಗೆ ಜವಾಬುದಾರ ಮನೆಯ ಯಜಮಾನನಾದ್ದರಿಂದ ನಾನು ಬರೆದುಕೊಡುವುದಕ್ಕೆ ಬರುವುದಿಲ್ಲ"!

"ನೀನು ಬರೆದುಕೊಡುವುದಕ್ಕೆ ಬರದಿದ್ದರೆ, ಹಿಂದೆ ಅಪ್ಪಯ್ಯ ಮಾಡಿದ ಹಾಗೆ ಅವರ ಹೆಸರಿಗೆ ನಂಬಿಕೆ ಕ್ರಯ ಬರೆದುಕೊಡಬೇಕಾಗುತ್ತದೆ."

"ಬಸಪ್ಪಗೌಡರ ಹಣಕ್ಕೇನುಮಾಡವಿ?"

"ಅಪ್ಪಯ್ಯಗೌಡರಿಂದ ಸಾಲ ತೆಗೆದು ತೀರಿಸೋಣ"!

"ನನ್ನ ಹೆಸರಿನಲ್ಲಿ ಜಮೀನಿಲ್ಲ; ನಾನು ಬರೆದುಕೊಡುವುದರಿಂದ ಪ್ರಯೋಜನವೇನು? ಹಣದ ಖಾತರಿಗೆ ಅನುಕೂಲವಿಲ್ಲದೆ ಹೋದರೂ ಸಾಲಕ್ಕೆ ಮಾತ್ರ ನಾನು ಜವಾಬುದಾರಿಯಾಗುತ್ತೇನೆ."

"ಸಾಲಕ್ಕೆ ಮಾತ್ರ ನೀನು ಜವಾಬುದಾರಿ ಹೊರಬೇಡ, ಮೂಲ ವಿದ್ದರೆ ಹಿಸ್ಸೆ ಕೇಳು."

ಗುರಪ್ಪಗೌಡನಿಗೆ ತುಂಬಾ ಸಿಟ್ಟುಬಂತು; ತನ್ನ ನಿಸ್ಸಹಾಯತನ ತನ್ನ ಕಣ್ಣುಮುಂದೆ ಪ್ರತ್ಯಕ್ಷವಾಗಿತ್ತು. ಯಾವ ಮಾರ್ಗದಲ್ಲೂ ಕ್ಷೇಮ ವಿಲ್ಲ; ನಂಬಿದ ಅಣ್ಣನೇ ಕತ್ತಿಗೆ ಉರುಳು ಹಾಕುವ ಪ್ರಯತ್ನದಲ್ಲಿದಾನೆ. ಜಮೀನು ತನ್ನ ಹೆಸರಿನಲ್ಲಿಲ್ಲ, ತನ್ನ ಹೆಸರಿಗೆ ಮಾಡಿಕೊಡಲು ಅಣ್ಣ ಒಪ್ಪುವುದಿಲ್ಲ. ಇದರ ಜೊತೆಯಲ್ಲಿ ಸಾಲಬೇರೆ ಹೊತ್ತುಕೊಳ್ಳಲು ಬಲವಂತ ಮಾಡುತಿದಾರೆ. ಬಲಶಾಲಿ ಯಾದವನ ಕೋಪ ಕಾರ್ಯದಲ್ಲಿ ಪರಿಸಮಾಪ್ತಿ

ಹೊಂದುವುದು, ನಿರ್ಬಲನ ಕೋಪ ಕಣ್ಣಿನಲ್ಲಿ ಹರಿಯುವುದು. ಗುರಪ್ಪನ ಕೋಪ ಕಣ್ಣೀರಿನಲ್ಲಿ ಪರಿವರ್ತನೆಯಾಯಿತು; ಅವನು ಹೇಳಿದ "ನಿನ್ನ ಮೂಲವೂ ಬೇಡ, ಸಾಲವು ಬೇಡ; ಕೈಕಾಲುಗಳೊಂದಿಗೆ ಬಿಡು, ಎಲ್ಲಿಯಾದರೂ ಹೋಗಿ ಬದುಕಿಕೊಳ್ಳುವೆನು."

ಗುರಪ್ಪ ಎಲ್ಲಿಯಾದರೂ ಹೋಗಿ ಬದುಕಿಕೊಳ್ಳುವಂಥಾ ಕೆಲಸ ನಾನೇನು ಮಾಡಿರುವೆನೆಂದು ಸುಬ್ಬಯ್ಯಗೌಡ ಯೋಚಿಸಿದ. ಹಿರಿಯುವನಾಗಿ ಹುಟ್ಟಿದ ತಪ್ಪಿಗೆ ಮನೆತನವನ್ನು ಉದ್ಧಾರಮಾಡಬೇಕೆಂಬ ಚಿಂತೆಯಲ್ಲಿ ನಾನಿರುವೆನು. ಬರಬರುತ್ತಾ ಇವನ ಕೆಲಸಕಾರ್ಯವೇತಕ್ಕೆ ವಿಪರೀತವಾಗುತಿದೆ. ಸಾಲಕ್ಕೆ ನಾನು ಹೊಣೆಯಾಗಬಾರದೆಂಬ ಮನಸ್ಸಿನಿಂದ ಈ ಕುಂಟುನೆಪಗಳನ್ನೆತ್ತುತಿರುವನೆಂದುಕೊಂಡು ಹೇಳಿದ, "ನಿನ್ನ ಮನಸ್ಸು ನನಗೆ ಗೊತ್ತಾಗುವುದಿಲ್ಲ, ಸರಿಯಾಗಿ ಕೆಲಸಕಾರ್ಯವನ್ನು ಮಾಡದೆ ದಿನ ಬೆಳಗಾದರೆ ನೆಂಟರ ಮನೆ ತಿರುಗುತಿರುವೆ. ಹೋಗಿ ಇಬ್ಬರೂ ಬರೆದು ಕೊಟ್ಟು ಸಾಲ ತರೋಣವೆಂದರೆ ದೇಶಾಂತರ ಹೋಗುತ್ತೇನೆಂದು ಹೆದರಿಸುತಿರುವೆ. ನೀನು ಹೊರಟುಹೋದರೆ ನಾನೇನು ಹಾಳಾಗಿಹೋಗುತ್ತೇನೆಯೋ?"

ಸುಬ್ಬಯ್ಯಗೌಡನ ಮಾತಿನಿಂದ ಎರಡು ವಿಚಾರಗಳು ಸ್ಪಷ್ಟವಾದವು: ಮೊದಲನೆಯುದು, ಜಮೀನೆಲ್ಲ ನನ್ನ ಹೆಸರಿನಲ್ಲದೆ, ನಿನ್ನ ಕೈಯಿಂದ ಏನೂ ಮಾಡುವುದಕ್ಕಾಗುವುದಿಲ್ಲವೆಂಬುವುದು; ಎರಡನೆಯುದು, ನಾಗಯ್ಯನಿಗೆ ಹೇಳುತಿರುವಂತೆ ನೀನು ಕೆಲಸಕಾರ್ಯಗಳನ್ನು ಸರಿಯಾಗಿ ಮಾಡುವುದಿಲ್ಲವೆಂದು ಹೇಳಿ ತನ್ನನ್ನು ನಾಗಯ್ಯನ ಜೊತೆ ಸೇರಿಸಿದ್ದು.

ಅಣ್ಣನ ಮಾತಿನಲ್ಲಿಯೂ ಅತಿಶಯೋಕ್ತಿ; ತಮ್ಮನ ಯೋಚನೆಯಲ್ಲಿಯೂ ಅತಿಶಯೋಕ್ತಿ.

ಮನೆಯ ಸರ್ವ ಕೆಲಸಕಾರ್ಯವನ್ನೂ ನಿರ್ವಹಿಸಿಕೊಂಡು ಹೋಗುವವನು ಗುರಪ್ಪಗೌಡ; ಕೆಲಸಮಾಡದೆ ತಿರುಗಾಡಿಕೊಂಡು ಜೀವಿಸಿರುವವ ಸುಬ್ಬಯ್ಯಗೌಡ. ಮೋಟಾರಿನಲ್ಲಿ ತಿರುಗಾಡುವ ವ್ಯಕ್ತಿ, ಮೋಟಾರಿನಲ್ಲಿ ತಿರುಗಾಡುವುದೇ ತನ್ನ ಧರ್ಮ ಮತ್ತು ಕರ್ತವ್ಯವೆಂಬ ದೃಢಮನಸ್ಸಿನಲ್ಲಿರು

ವನು. ಇತರರು ನನ್ನ ಹಾಗೆ ಮೋಟಾರನ್ನು ಕೊಂಡುಕೊಂಡು ತಿರುಗಾಡಲು ನಾನು ಯಾರಿಗೂ ಅಡ್ಡಿಮಾಡುವುದಿಲ್ಲವೆನ್ನುತ್ತಾನೆ. ಪ್ರಪಂಚದಲ್ಲಿ ಯಾರೂ ಅರಿಯದ ಸತ್ಯವನ್ನು ತಾನು ಹೇಳಿರುವನೆಂದು ನಂಬಿರುತ್ತಾನೆ. ಆದ್ದರಿಂದ ಅವನು ಯಾವಾಗಲೂ ಕಾಲ್ನಡಿಯಲ್ಲಿ ಹೋಗುವವರ ವಿಚಾರ ಯೋಚಿಸುವುದಿಲ್ಲ. ಒಂದುವೇಳೆ ಅದನ್ನೂ ದಾಟಿ ಯೋಚಿಸಲು ಹೋದರೆ ದೇವರು, ಧರ್ಮ, ಕರ್ಮಗಳು ಬರುವುವು. ಆದಿಯಿಂದ ಇಂದಿನ ವರೆಗೂ ದೇವರು, ಧರ್ಮ, ಕರ್ಮಗಳನ್ನು ಕಂಡವರು ಹೊಟ್ಟೆತುಂಬಿದ ಕೆಲವು ಮಂದಿ ಭೋಗಿಗಳು. ಆ ಜೀವನ ಒಬ್ಬನು ಮೋಟಾರಿನಲ್ಲಿಯೇ ತಿರುಗಾಡುವುದೂ ಹಲವರು ಕಾಲುನಡೆಯಲ್ಲಿಯೇ ತಿರುಗಾಡುತಿರುವುದೂ ಕರ್ಮದ ಫಲವಾದರೆ ಆ ಕರ್ಮವನ್ನು ವಿಧಿಸುವವನು ದೇವರಲ್ಲ; ದೆವ್ವ. ಅಂಥ ದೆವ್ವದ ನಿಯಮವನ್ನು ಕರ್ಮದ ಹೆಸರಿನಲ್ಲಿಯೇ ಭೋಗಿಸುವುದಕ್ಕಿಂತಲೂ ವಿರೋಧಿಸಿ ಕಿತ್ತೊಗೆಯುವುದು ಮನುಷ್ಯನ ಪ್ರಥಮ ಕರ್ತವ್ಯ. ನಿಜವಾದ ಕರ್ಮದ ಸ್ವರೂಪ ಇದಕ್ಕಿಂತ ಬಹುದೂರದಲ್ಲಿದೆ. ಒಬ್ಬ ವ್ಯಕ್ತಿ ಮೋಟಾರಿನಲ್ಲಿ ತಿರುಗಾಡುತ್ತನೆಂದರೆ ಸಹಸ್ರಜನ ಬರಿಗಾಲಿನಲ್ಲಿ ಅಲೆಯುವರೆಂದು ಅರ್ಥ. ಒಬ್ಬನ ಮನೆಯಲ್ಲಿ ಮೃಷ್ಟಾನ್ನ ಭೋಜನವೆಂದರೆ ಸಹಸ್ರಜನರಿಗೆ ಉಪವಾಸವೆಂದು ಅರ್ಥ. ಅದೇ ನಿಜವಾದ ಕರ್ಮದ ಫಲ. ಸಹಸ್ರಾರು ಮಂದಿಯನ್ನು ಬರಿಗಾಲಿನಲ್ಲಿ ನಡೆಯಿಸಿ ಒಬ್ಬನು ಮೋಟಾರಿನಲ್ಲಿ ತಿರುಗಾಡುವುದನ್ನು ತಪ್ಪಿಸುವುದು, ಸಹಸ್ರಮಂದಿ ಉಪವಾಸವಿದ್ದು ಒಬ್ಬನ ಮನೆಯಲ್ಲಿ ಭಕ್ಷಭೋಜನವಾಗುತ್ತಿರುವುದನ್ನು ತಪ್ಪಿಸುವುದು ನಿಜವಾದ ಧರ್ಮ. ಅದನ್ನುಳಿದ ತತ್ವಗಳು ದೈವೀ ನಿರ್ಮಾಣವಲ್ಲ; ಪೈಶಾಚಕವಾದ್ದು. ಎಲ್ಲರಜೀವನವೇ ತನ್ನ ಜೀವನ, ಎಲ್ಲರ ಸುಖವೇ ತನ್ನ ಸುಖವೆಂದುತಿಳಿದು ಅದೇರೀತಿ ನಡೆಯುವುದು ಕರ್ಮ; ಅದರ ಫಲ ಲೋಕಕಲ್ಯಾಣ ವ್ಯಷ್ಟಿ ಕರ್ಮಕ್ಕೆ ಸ್ವತಂತ್ರನು, ಫಲಕ್ಕೆ ಸಮಷ್ಟಿ. ಯಾವಾಗ ವ್ಯಷ್ಟಿ ಫಲಫೇಕ್ಷೆಯಿಂದ ಕೆಲಸಮಾಡುತ್ತಾನೋ ಆಗ ಸಮಾಜದಲ್ಲಿ ವಿಷಮತೆ ಹುಟ್ಟುವುದು. ಒಬ್ಬನು ಮೋಟಾರಿನಲ್ಲಿ ತಿರುಗಾಡುತ್ತಾನೆಂದರೆ ಅವನು ಸಹಸ್ರಜನರ ಸಂಪಾದನೆಯಲ್ಲಿ ಜೀವಿಸುತ್ತಿರುವನೆಂದು ಅರ್ಥ.

ಸುಬ್ಬಯ್ಯಗೌಡ ಸಂಶಯ ದೃಷ್ಟಿಯಿಂದ ಗುರಪ್ಪಗೌಡನನ್ನು ನೋಡಿದ ನೇವಿನಾ ಕಾನೂನನಾಗಲಿ, ನ್ಯಾಯನನ್ನಾಗಲಿ, ಪರಿಶೀಲಿಸಲಿಲ್ಲ ಅಪ್ಪಯ್ಯಗೌಡರಿಗೆ ಗುರಪ್ಪಗೌಡ ಬರೆದು ಕೊಡಲಿಲ್ಲ, ಬಸಪ್ಪಗೌಡರ ಸಾಲ ಸುಬ್ಬಯ್ಯಗೌಡ ತೀರಿಸಲಿಲ್ಲ.

ವಾದ ಕೊನೆ ಮುಟ್ಟುವುದಿಲ್ಲ, ಕೊನೆಮುಟ್ಟುವುದು ಕೆಲಸ. ತರ್ಕ ಮೊಂಡಾದಾಗ ಕಾರ್ಯ ಆರಂಭವಾಗುವುದು. ಅಣ್ಣ ತಂಮ್ಮಂದಿರಲ್ಲಿ ಮತ ಭೇದ ಹುಟ್ಟಿದಮೇಲೆ ಅಪ್ಪಯ್ಯಗೌಡರೂ ಬಸಪ್ಪಗೌಡರೂ ಹಣಕ್ಕೆ ತಗಾದೆ ಪ್ರಾರಂಭಿಸಿದರು.

ನೆಮ್ಮದಿಯಲ್ಲಿ ಅಣ್ಣತಮ್ಮ; ಭಂಗಬಂದಾಗ ದಾಯಾದಿ. ನೆಮ್ಮದಿಯಲ್ಲಿಯೇ ನೂರಾರು ತೊಡಕುಗಳಿರುವಾಗ ಶಾಂತಿಯಲ್ಲಿ ಹೇಳಬೇಕಾದ್ದಿಲ್ಲ. ತನ್ನ ಸ್ಥಾನ ಭದ್ರಮಾಡಿಕೊಳ್ಳುವ ಉದ್ದೇಶದಿಂದ ತಮ್ಮ ಎಲ್ಲಾ ಆಸ್ತಿಯನ್ನು ಬಸಪ್ಪಗೌಡರ ಹೆಸರಿಗೆ ಹನ್ನೆರಡುವರೆ ರೂಪಾಯಿಯ ಛಾಪಾಕಾಗದದ ಮೇಲೆ ಶುದ್ಧ ಕ್ರಯಕ್ಕೆ ನಂಬಿಕೆ ಕ್ರಯ ಮಾಡಿಕೊಟ್ಟ. ತಮ್ಮನ ಈ ಕೆಲಸ ಅಣ್ಣನನ್ನು ಮತ್ತೂ ರೇಗಿಸಿತು. ಯಜಮಾನಿಕೆ, ಹಿರಿಯ ತನಗಳನ್ನು ಉತ್ತಮ ರೀತಿಯಲ್ಲಿ ಉಪಯೋಗಿಸಿ ಸುಬ್ಬಯ್ಯಗೌಡ ಹನ್ನೆರಡುವರೆ ರೂಪಾಯಿಯ ಛಾಪಾಕಾಗದದ ಮೇಲೆ ಶುದ್ಧ ಕ್ರಯ ಮೆಂದು ಅಪ್ಪಯ್ಯಗೌಡರಿಗೆ ನಂಬಿಕೆ ಕ್ರಯ ಬರೆದುಹಾಕಿದ.

ಸಾಲಮಾಡಿದವರಿಗೆ ಜಮೀನಿಗಿಂತ ತಮ್ಮ ಮೇಲೆ ಹೆಚ್ಚು ನಂಬಿಕೆ. ಸಾಲಕೊಟ್ಟವರಿಗೆ ಸಾಲಗಾರರಿಗಿಂತಲೂ ಅವರ ಆಸ್ತಿಯ ಮೇಲೆ ತುಂಬಾ ನಂಬಿಕೆ. ಹಣಗಾರರಗಮನ ಎಳ್ಳಷ್ಟು ವ್ಯಕ್ತಿಯ ಮೇಲಿರುವುದಿಲ್ಲ. ಅವರ ಮನಸ್ಸೆಲ್ಲ ತಮ್ಮ ಹಣ, ಬಡ್ಡಿಯೊಂದಿಗೆ ಸುರಕ್ಷಿತವಾಗಿ ಹಿಂತಿರುಗುವುದರ ಮೇಲಿರುತ್ತದೆ.

ಅಪ್ಪಯ್ಯಗೌಡರು, ಬಸಪ್ಪಗೌಡರು ಅಣ್ಣೇಮಕ್ಕಿಯವರಿಂದ ಜಮೀನನ್ನು ಶುದ್ಧಕ್ರಯಕ್ಕೆ ಪಡೆದಿದ್ದರೂ ಅದು ವ್ಯಾಜ್ಯಕ್ಕೆ ಕಾರಣವೆನ್ನುವುದು ಇಬ್ಬರಿಗೂ ಗೊತ್ತಿತ್ತು. ಆದಷ್ಟು ಉಪಾಯದಿಂದ ಇದರಿಂದ ಪಾರಾಗಲು ಅಣ್ಣತಂಮ್ಮಂದಿರಿಗೆ ರಾಜಿಮಾಡಲು ಪ್ರಯತ್ನಪಟ್ಟರು. ನಿಜವಾಗಿ ವ್ಯಾಜ್ಯಕ್ಕೆ ನಿಲ್ಲಬೇಕಾದವರು ಸುಬ್ಬಯ್ಯಗೌಡ, ಗುರಪ್ಪಗೌಡರಲ್ಲ;

ಅಪ್ಪಯ್ಯಗೌಡರು. ಬಸಪ್ಪಗೌಡರು ತಮ್ಮ ಹಣ ಬಡ್ಡಿ ಸಮೇತ ಹಿಂತಿರುಗಿ ಬರಬೇಕಾದ್ದು ಅವರಿಗೆ ಮುಖ್ಯವೇ ವಿನಾ ತಮ್ಮ ಶಕ್ತಿ ಪ್ರತಾಪಗಳನ್ನು ಪ್ರಪಂಚಕ್ಕೆ ತೋರಿಸಬೇಕಾಗಿರಲಿಲ್ಲ.

ರಾಜಿಗೆ ಒಬ್ಬರೂ ಬರಲಿಲ್ಲ. ಗುರಪ್ಪಗೌಡ ಹೇಳಿದ, "ನನ್ನ ಬಂಗ್ಯೆ ಮಾಡಿ ಹೆಂಡರು ಮಕ್ಕಳೊಂದಿಗೆ ದೇಶಾಂತರ ಅಟ್ಟಬೇಕೆಂದು ಅವನ ಮನಸ್ಸು. ಹಿರಿಯವನು. ಅಣ್ಣ ವಿಧರ್ಮ ಕರ್ಮದಿಂದ ನಾನು ಇದುವರಿಗೆ ತಗ್ಗಿ ನಡೆಯುತ್ತಾ ಬಂದೆ. ಒಳಗೊಳಗೆ ಎರಡು ಬಗೆಯುತ್ತಾನೆ. ಅವನನ್ನೂ ಅವರ ಹೆಂಡರು ಮಕ್ಕಳನ್ನೂ ದೇಶಾಂತರ ಮಾಡದಿದ್ದರೆ ನನ್ನ ಹೆಸರನ್ನು ತೆಗೆಯಬೇಕು.

ಬರಿಗ್ಯೆಯ್ಯ ತಮ್ಮನೇ ಇಷ್ಟು ಬಡಾಯಿ ಹೊಡೆಯುವಾಗ ಕಾನೂನಿನ ರೀತಿಯಲ್ಲಿ ಭದ್ರವಾಗಿರುವ ಸುಬ್ಬಯ್ಯಗೌಡನನ್ನು ಕೇಳಬೇಕಾದ್ದಿಲ್ಲ. ನಗುನಗುತ್ತಲೇ ಸಬ್ಬಯ್ಯಗೌಡ ಹೇಳಿದ, "ನಮ್ಮಿಬ್ಬರಿಗೂ ತಂದೆ ಇಲ್ಲ. ಅಣ್ಣ, ತಂದೆಗೆ ಸರಿಸಮಾನ, ಆದ್ದರಿಂದ ಅವನನ್ನು ಕಾಪಾಡುವುದು ನನ್ನ ಕರ್ತವ್ಯ. ಇನ್ನು ಅವನೇ ಹಾಳಾಗಿ ಹೋಗುವುದಕ್ಕೆ ಪ್ರಯತ್ನ ಪಟ್ಟರೆ ನನ್ನ ಯತ್ನವೇನೂ ಇಲ್ಲ, ಆದಕ್ಕೆ ನಿವೆಲ್ಲ ಸಾಕ್ಷಿ. ಯಜಮಾನನ ಹೆಸರಿನಲ್ಲಿ ಜಮೀನಿರುವುದು ಲೋಕ ರೂಢಿ; ನೀವು ಹಾಗೆಯೇ ಮಾಡುತ್ತೀರಿ. ಎರಡು ಕಡೆ ಸಾಲವಿರುವುದು ಸರಿಯಲ್ಲ. ಇಬ್ಬರೂ ಒಬ್ಬರಿಗೆ ಬರೆದು ಕೊಟ್ಟು ಒಂದೇ ಕಡೆ ಸಾಲವಿರುವಂತೆ ಮಾಡೋಣವೆಂದರೆ ಒಪ್ಪದೆ ಮನಸ್ಸು ಬಂದ ಹಾಗೆ ಮಾಡುತಿದಾನೆ."

ಸಹೋದರರಿಬ್ಬರೂ ಯಾವ ಒಪ್ಪಂದಕ್ಕೂ ಬರಲಿಲ್ಲ. ಕಷ್ಟ ಪಟ್ಟು ಬೆಳೆದ ಪೈರು ಗದ್ದೆಯಲ್ಲಿ ಕಟಾವಿಗೆ ಸಿದ್ಧವಾಗಿ ನಿಂತಿತ್ತು. ಯಾರು ಕೊಯ್ಯಬೇಕೆಂದು ನಿಶ್ಚಯವಾಗಿರಲಿಲ್ಲ. ಸಬ್ಬಯ್ಯಗೌಡ ತಾನು ಕೊಯಿಸುತ್ತೇನೆಂದು ಗುರಪ್ಪಗೌಡ ತಾನು ಕೊಯಿಸುತ್ತೇನೆಂದು ಹೇಳಿಕೊಂಡು, ಆಳುಗಳನ್ನು ಹುಡುಕುತ್ತಾ ತಿರುಗುತ್ತಿದ್ದರು. ಕಾನೂನಿನ ಪ್ರಕಾರ ಕೊಯಿಸಬೇಕಾದವರು ಅಪ್ಪಯ್ಯಗೌಡರೂ ಬಸಪ್ಪಗೌಡರೂ. ಯಾವಾಗಲೂ ದುಡ್ಡು ಒಂದಕ್ಕೊಂದು ಹೊಂದಿಕೊಂಡಿರುತ್ತವೆ. ಅಲ್ಲಿ ವ್ಯಾಜ್ಯಕ್ಕೆ ಅವಕಾಶವಿರುವುದಿಲ್ಲ. ಸಹೋದರರಿಗೆ ರಾಜಿ ಮಾಡುವ ಸಂದರ್ಭದಲ್ಲಿ,

ಯಾವಾಗ ಅವರು ರಾಜಿಯಾಗಲಿಲ್ಲವೋ ಆಗ ಹಣಸುರಿದು ಇವರು ರಾಜಿ ಯಾದರು. ಇಬ್ಬರೂ ರಾಮಶಾಸ್ತ್ರಿಗಳಿಗೆ ಬೇರೆ ಬೇರೆಯಾಗಿ ಹನ್ನೆರಡುವರೆ ರೂಪಾಯಿಯ ಛಾಪಾಕಾಗದದಮೇಲೆ ಶುದ್ಧ ಕ್ರಯಕ್ಕೆ ಕ್ರಯಪತ್ರ ಮಾಡಿಕೊಟ್ಟು ತಮ್ಮ ಹಣ ಹಣದಬಡ್ಡಿ, ಖರ್ಚುಸಮೇತ, ಅವರಿಂದ ಆಕಾರ ಮಾಡಿಕೊಂಡರು.

## ಐದು

ಮನೆಗೆ ಬೆಂಕಿ ಬಿದ್ದರೆ ಜನರು ಮನೆಬಿಟ್ಟು ಓಡುತ್ತಾರೆ, ಮಳೆ ಬಂದರೆ ಮನೆಯೊಳಗೆ ಬರುತ್ತಾರೆ. ರಾಮಾಶಾಸ್ತ್ರಿಗಳ ಹೆಸರಿಗೆ ಅಣ್ಣೀ ಮಕ್ಕಿಯ ಜಮೀನು ಶುದ್ಧ ಕ್ರಯವಾದ್ದರಿಂದ ಸುಬ್ಬಯ್ಯಗೌಡ, ಗುರಪ್ಪ ಗೌಡ ತಿರುಗಿ ಒಂದಾದರು. ತಮ್ಮ ಅವಿವೇಕಕ್ಕೆ ತಾವೇ ಬೈದುಕೊಂಡು ಪಿತ್ರಾರ್ಜಿತವಾಗಿ ಬಂದ ಆಸ್ತಿಯನ್ನು ಹಿಂದಕ್ಕೆ ಹೊಂದಲು ಪ್ರಯತ್ನಕ್ಕೆ ಆರಂಭಿಸಿದರು. ಎಲ್ಲ ಪ್ರಯತ್ನಗಳಿಗಿಂತ ಹಣದ ಪ್ರಯತ್ನ ಮುಖ್ಯವಾದ್ದು. ಇವರಿಗೆ ಸಾಲ ಕೊಡಲು ಯಾರೂ ಮುಂದೆ ಬರಲಿಲ್ಲ.

ಹಣ, ಅದರ ಬಡ್ಡಿ, ಕ್ರಯಪತ್ರದ ಖರ್ಚೆಲ್ಲ ಸೇರಿ ಆರನೂರನ್ನು ಮುಟ್ಟಿತ್ತು. ಇದಲ್ಲದೆ ನೂರು ರೂಪಾಯಿ ಹೆಚ್ಚಿಗೆ ಕೊಡುವುದಾದರೆ ಜಮೀನನ್ನು ಬಿಟ್ಟುಕೊಡುವುದಾಗಿ ರಾಮಾಶಾಸ್ತ್ರಿಗಳು ಅಣ್ಣೀಮಕ್ಕಿ ಯವರಿಗೆ ಹೇಳಿದರು. ಈಗ ಇವರು ಏಳನೂರು ರೂಪಾಯಿ ತೆರಬೇಕಾ ಯಿತು. ಆ ಆಸ್ತಿಯ ಮೇಲೆ ಏಳುನೂರು ರೂಪಾಯಿ ನಗದು ಕೊಡಲು ಯಾರೂ ಸಿದ್ಧರಾಗಿರಲಿಲ್ಲ. ಯಾರಾದರೂ ಪುಣ್ಯಾತ್ಮ ಮುಂದೆ ಬಂದರೂ ಅವರಿಗೆ ನಂಬಿಕೆಕ್ರಯಮಾಡಿಕೊಡಬೇಕೆಂದರೆ ತಿರುಗಿ ಹಿಂದಿನ ಕಥೆ ಪ್ರಾರಂಭ. ಆದ್ದರಿಂದ ಸುಬ್ಬಯ್ಯಗೌಡ, ಗುರಪ್ಪಗೌಡ ತಮ್ಮ ಬುದ್ಧಿ ಯನ್ನೆಲ್ಲ ಉಪಯೋಗಿಸಿ ಉಪಾಯ ಹುಡುಕಿದರು.

ಒಂದು ಪ್ರಯಾಸಕರವಾದ ಮಾರ್ಗ ಸಿಕ್ಕಿತು. ಅದು ಪ್ರಯಾಸ ಕರವಾಗಿದ್ದರೂ ಜಮೀನು ಕೈತಪ್ಪಿಹೋಗುವಷ್ಟಿರಲಿಲ್ಲ. ತಮ್ಮ ಬಳಿ ಯಲ್ಲಿರುವ ದನಕರುಗಳನ್ನು ಮಾರಿ ಸಾಧ್ಯವಾದಷ್ಟು ಸಾಲದ ಹೊರೆ

ಯನ್ನು ಹಗುರವಮಾಡಿಕೊಳ್ಳಲು ಇಬ್ಬರು ಒಮ್ಮನಸ್ಸಿಂದ ಅಭಿಪ್ರಾಯಪಟ್ಟರು.

ಮಕ್ಕಳ ಹಠ, ರೈತರ ಯೋಚನೆ ಎರಡೂ ಒಂದೇ. ಮಗು ಎಷ್ಟೇ ಹಠಮಾಡುತಿರಲಿ ತಿಂಡಿ ಸಿಕ್ಕ ತಕ್ಷಣ ಸುಮ್ಮನಾಗುತ್ತದೆ. ರೈತ ಎಷ್ಟೇ ಹಣದ ತೊಂದರೆಯಲ್ಲಿರಲಿ, ಎಷ್ಟೇ ಅಪಮಾನ ಸಹಿಸುತಿರಲಿ ತನ್ನ ಪದಾರ್ಥಗಳೊಂದನ್ನೂ ಮಾರಲು ಬಯಸುವುದಿಲ್ಲ. ತಾನು ಬೆಳೆದ ಧಾನ್ಯವನ್ನೂ ಅವನು ಮಾರುವ ಯೋಚನೆಯಲ್ಲಿರುವುದಿಲ್ಲ. ವರ್ಷದ ಕೊನೆಯು ವರೆಗೂ ಕೈಯಲ್ಲಿಟ್ಟುಕೊಂಡು ಹೊಸ ಪೈರು ಕೈಗೆ ಬಂದ ಮೇಲೆ ಹಳೆಯು ಧಾನ್ಯವನ್ನು ಕೈಬಿಡುತ್ತಾನೆ. ಅವನು ಸಾಲ ತೀರಿಸಲು ದನಕರುಗಳನ್ನು ಮಾರುವನೆ? ವಿಪತ್ತಿನಲ್ಲಿ ಮಾರುವುದಾಗಿ ಬಾಯಲ್ಲಿ ಹೇಳುತ್ತಾನೆ. ಮಾರುವ ಸಮಯ ಬಂದಾಗ ಮನಸ್ಸನ್ನು ಬದಲಾಯಿಸುತ್ತಾನೆ. ರೈತರಿಂದ ಸಾಲಕ್ಕೆ ಜಮೀನನ್ನಾಗಲಿ, ದನಕರುಗಳನ್ನಾಗಲಿ ವಸೂಲು ಕಟ್ಟಬೇಕಾದ ಪ್ರಮೇಯ ಬಂದಾಗ ಜಫ್ತಿಯ ಮೂಲಕವೇ ಸಾಧ್ಯ.

ದನಕರುಗಳನ್ನು ಮಾರುವ ನಿರ್ಧಾರಕ್ಕೆ ಸಹೋದರರಿಬ್ಬರು ಬಂದರು. ದನಕರುಗಳನ್ನು ಮಾರಿದರೆ ವ್ಯವಸಾಯ ನಡೆಯುವುದು ಹೇಗೆ? ಉಳಲು ಎತ್ತು ಬೇಕು, ಒಕ್ಕಲು ಎತ್ತು ಬೇಕು, ಗೊಬ್ಬರಕ್ಕೆ ದನಕರು ಬೇಕು. ದನಕರುಗಳಿಲ್ಲದೆ ಜೀವಿಸಿರಲು ಗುಮಾಸ್ತೆಯ ಕೆಲಸವಲ್ಲ. ಜಮೀನಿಲ್ಲದೆ ದನಕರುಗಳನ್ನು ಕಟ್ಟಿಕೊಂಡು ಪ್ರಯೋಜನವೇನೆಂದು ಯೋಚಿಸಿ ಕೊನೆಗೆ ಅತ್ಯಾವಶ್ಯಕವಾದ ಎತ್ತು ದನಕರುಗಳನ್ನಿಟ್ಟುಕೊಂಡು ಮಿಕ್ಕವುಗಳನ್ನು ಮಾರಿದರು. ಕೈಗೆ ಮುನ್ನೂರೈವತ್ತು ರೂಪಾಯಿ ಬಂತು. ಸಾಲದ ಬೆಟ್ಟವನ್ನು ಕರಗಿಸಲು ಇನ್ನೂ ಮುನ್ನೂರೈವತ್ತನ್ನು ಎಲ್ಲಿಂದ ತರುವುದು?

ತಿರುಗಿ ಸಹೋದರರಿಬ್ಬರೂ ಆಳೆಯಲು, ಸುರಿಯಲು ಆರಂಭಿಸಿದರು. ಎಷ್ಟೇ ಅಳೆದು ಸುರಿದರೂ ಕೊನೆಗೆ ನಿಲ್ಲುವುದು ಸೊನ್ನೆ. ಅವರ ಮನೆಯಲ್ಲಿ ಒಂದು ಗಾಡಿ, ಒಂದು ಜೊತೆ ಎತ್ತು ಇತ್ತು. ಅದರ ಸಹಾಯದಿಂದ ಮನೆಯ ಎಲ್ಲ ಕೆಲಸಕಾರ್ಯವನ್ನು ಮಾಡುವುದಲ್ಲದೆ ಬಾಡಿಗೆಯನ್ನು ಹೊಡೆದು ಹಣ ಸಂಪಾದಿಸುತ್ತಿದ್ದರು. ಗಾಡಿ ಬಾಡಿಗೆಗೆ ಹೋಗುವಾಗ

ಅಣ್ಣ ತಮ್ಮನಲ್ಲಿ ತಿಕ್ಕಾಟ ಪ್ರಾರಂಭವಾಗುತ್ತಿತ್ತು. ಅಣ್ಣ ಎತ್ತುಗಳನ್ನು ಓಡಿಸಿ ಹೊಡೆದು ಹಾಳುಮಾಡುವನೆಂದು ತಮ್ಮ; ತಮ್ಮ ಹಾಳುಮಾಡುವನೆಂದು ಅಣ್ಣ. ಹೀಗೆ ಇಬ್ಬರೂ ಎತ್ತುಗಳನ್ನು ಅತ್ಯಂತ ಪ್ರೀತಿಯಿಂದ ಸಾಕಿಕೊಂಡಿದ್ದರು. ಇಬ್ಬರ ಮನಸ್ಸು ಗಾಡಿ, ಎತ್ತಿನ ಕಡೆ ತಿರುಗಿತು. ಗಾಡಿ ಎತ್ತುಗಳನ್ನು ಮಾರಲು ಮನಸ್ಸಿಲ್ಲ; ಅವುಗಳನ್ನು ಮಾರದೆ ಕೈಗೆ ಜಮೀನು ಬರುವಹಾಗಿಲ್ಲ.

ಗಾಣಿಗರು, ಮಗ್ಗದವರು, ಕಮ್ಮಾರರು, ಕುಂಬಾರರು ಇವರಿಗೆ ತಮ್ಮ ಕೆಲಸ ತಪ್ಪಿದರೆ ಭೂಮಿಗೆ ಶರಣುಹೋಗುತ್ತಾರೆ. ರೈತನಿಗೆ ಜಮೀನು ತಪ್ಪಿಹೋದರೆ ಅವನೆಲ್ಲಿಗೆ ಹೋಗಬೇಕು?

ಮನಸ್ಸಿಲ್ಲದ ಮನಸ್ಸಿನಿಂದ, ಕಣ್ಣಲ್ಲಿ ನೀರುತಂದು ಸಾಲದಿಂದ ಕೈತೊಳೆದುಕೊಳ್ಳಲು ಎತ್ತನ್ನು ಕೈಬಿಟ್ಟರು. ಇನ್ನೂರೈವತ್ತು ರೂಪಾಯಿ ಇದರಿಂದ ಕೈಗೆಬಂತು. ನೂರು ರೂಪಾಯಿ ಬಾಕಿ ನಿಂತಿತು. ಜಮೀನನ್ನು ಹಿಂದಕ್ಕೆ ಪಡೆಯಬೇಕಾದರೆ ಛಾಪಾಕಾಗದ, ಬರವಣಿಗೆ ಇತ್ಯಾದಿಗಳಿಗೆ ಐವತ್ತು ರೂಪಾಯಿ ಬೇರೆ ಖರ್ಚು. ಇನ್ನು ನೂರೈವತ್ತು ರೂಪಾಯಿ ಯಾದರೆ ಸಾಲವಿಲ್ಲದ ಲೆಕ್ಕಾಚಾರವಾಗುತ್ತಿತ್ತು.

ಸಾಲವಿಲ್ಲದ ಲೆಕ್ಕಾಚಾರದ ಯೋಚನೆಯ ಜೊತೆಗೆ ಯಾರ ಹೆಸರಿಗೆ ಕ್ರಯಪತ್ರವಾಗಬೇಕೆಂಬುದೊಂದು ವಿಚಾರ. ಅಣ್ಣನ ಹೆಸರಿಗೆ ತಮ್ಮ ಒಪ್ಪುವುದಿಲ್ಲ, ತಮ್ಮನ ಹೆಸರಿಗೆ ಅಣ್ಣ ಒಪ್ಪುವುದಿಲ್ಲ. ಈ ಹಿಂದೆ ನಡೆದ ವ್ಯವಹಾರದ ನೆನಪು ಇಬ್ಬರಿಗೂ ಇತ್ತು. ಸಮ ಹಿಸ್ಸೆಮಾಡಿ ಇಬ್ಬರೂ ತಮ್ಮ ಹೆಸರಿಗೆ ಕ್ರಯಪತ್ರ ಮಾಡಿಕೊಳ್ಳುವ ಮಾರ್ಗವೊಂದಿತ್ತು. ಮುಂಪಾಲೋಚನೆಯುಳ್ಳ ಸುಬ್ಬಯ್ಯಗೌಡ ಎಷ್ಟುಮಾತ್ರಕ್ಕೂ ತಮ್ಮನ ಹೆಸರಿಗೆ ಕ್ರಯಪತ್ರವಾಗುವುದನ್ನು ಸಹಿಸಲಿಲ್ಲ. ಸ್ವಯಂಬುದ್ಧಿಯಿಲ್ಲದ ಆತನಿಗೆ ಜವಾಬುದಾರಿಯ ಯಾವಕಾರ್ಯವನ್ನೊಪ್ಪಿಸಲೂ ಅವನಿಗೆ ಮನಸ್ಸಿರಲಿಲ್ಲ. ತಮ್ಮನ ದುಡಿತ ಮಾತ್ರ ಅವನ ಮನಸ್ಸಿಗೆ ಬಂದಿತ್ತು. ಆತನ ಜೊತೆಯಲ್ಲಿರಬೇಕೆಂಬ ಆಶೆಗೂ ಅದೇ ಕಾರಣ. ತಮ್ಮನಿಂದ ಬೇರೆಯಾದ ಮರುದಿವಸ ಸುಬ್ಬಯ್ಯಗೌಡ ದುಡಿಯಲು ಸಿದ್ಧನಾಗಬೇಕಿತ್ತು. ಆಳು ಕಾಳುಗಳಿಂದ ದುಡಿಸುವಷ್ಟು ಶ್ರೀಮಂತನಲ್ಲ.

ಅವಿಭಕ್ತ ಕುಟುಂಬದಲ್ಲಿ ಕುಟುಂಬದ ಆಸ್ತಿಯನ್ನು ಸಮಹಿಸ್ಸೆಯಾಗಿ ತಮ್ಮ ತಮ್ಮ ಹೆಸರಿಗೆ ಕ್ರಯಮಾಡಿಕೊಳ್ಳುವುದು ಒಡಕಿಗೆ ಕಾರಣವೆಂದು ಜನರಲ್ಲಿ ನಂಬಿಕೆ. ಅದೂ ಅಲ್ಲದೆ ಅವಿಭಕ್ತ ಹಿಂದೂ ಕುಟುಂಬದಲ್ಲಿ ಹಿರಿಯನೊಬ್ಬನಿರುವಾಗ ತಮ್ಮನ ಹೆಸರಿಗೆ ಕ್ರಯಪತ್ರವಾಗುವುದು ಆತನ ಹಿರಿಯತನಕ್ಕೆ ಕಳಂಕ. ಆ ಕಳಂಕ ಸಹಿಸಿಕೊಂಡು ಯಾವ ಹಿರಿಯ ಹಿಂದೂ ಜೀವಿಸಿರುವನು ? ಇನ್ನು ರೈತರಲ್ಲಿ ಕೇಳಬೇಕಾಗಿಲ್ಲ; ಸರ್ವ ಕಾರುಬಾರು ಹಿರಿಯತನದ ಮೇಲೇ ಜ್ಞಾನಕ್ಕಾಗಲಿ, ತರ್ಕಕ್ಕಾಗಲಿ ಅಲ್ಲಿ ಅವಕಾಶವಿಲ್ಲ; ಏನಿದ್ದರೂ ವಯಸ್ಸು. ಅವರಲ್ಲಿ ಹೆಚ್ಚು ವಯಸ್ಸಿನವನೇ ಹೆಚ್ಚು ಬುದ್ಧಿವಂತ. ಹೀಗಿರುವಾಗ ಸುಬ್ಬಯ್ಯಗೌಡ ಒಪ್ಪುವನೇ ? ತಮ್ಮನ ಕಾಲಿನ ಕಸವಾಗಿ ಬದುಕುವುದಕ್ಕಿಂತಲೂ ಭೂಮಿಯ ಮಣ್ಣಾಗುವುದು ಲೇಸೆಂಬುವುದು ಹಿರಿಯತನದ ತತ್ವ.

## ಆರು

ಸಾಲ ತೀರಿಸಲು ದನಕರು, ಎತ್ತು ಗಾಡಿಗಳನ್ನು ಮಾರಿ ಹಣ ಒಟ್ಟುಗೂಡಿಸುತ್ತಾ, ಕ್ರಯಪತ್ರ ಯಾರ ಹೆಸರಿಗಾಗಬೇಕೆಂದು ಯೋಚಿಸುತ್ತಾ ಇರುವಾಗ ಮಳೆಗಾಲ ಆರಂಭವಾಯಿತು. ಮುಂದಿನ ಬೇಸಾಯಕ್ಕೆ ಯಾವ ಸಲಕರಣೆಯನ್ನೂ ಅಣ್ಣೀಮಕ್ಕಿಯಲ್ಲಿ ಮಾಡಿರಲಿಲ್ಲ. ರಾಮಾ ಶಾಸ್ತ್ರಿಗಳಿಗೆ ಹಣದ ಅಡಚಣೆ ತುಂಬಾ, ಅನೇಕ ಸಾರಿ ಅಣ್ಣೀಮಕ್ಕಿಗೆ ಹೇಳಿ ಕಳುಹಿಸಿದರು; ಯಾರಾದರೊಬ್ಬರು ಬರುವಂತೆ ತಿಳಿಸಿದರು. ಅದರಿಂದ ಪ್ರಯೋಜನವೇನೂ ಆಗಲಿಲ್ಲ ಕುಳಿತಲ್ಲಿಯೇ ನೂರು ರೂಪಾಯಿ ಸಂಪಾದಿಸಿದೆನೆಂಬ ಸಂತೋಷ ವಿನಾ ಶಾಸ್ತ್ರಿಗಳ ಕೈಗೆ ಹಣ ಬಂದಿರಲಿಲ್ಲ.

ಬೇಸಾಯ ಬಿತ್ತನೆಯ ಯೋಚನೆ ಇರಲಿಲ್ಲ, ಸುಬ್ಬಯ್ಯಗೌಡ, ಗುರಪ್ಪಗೌಡ ಮನೆಯಲ್ಲಿದ್ದರು. ಹರಹರ, ಶಿವಶಿವ ಎಂದುಕೊಂಡು ಶಾಸ್ತ್ರಿಗಳೊಂದು ದಿನ ಅಣ್ಣೀಮಕ್ಕಿಗೆ ಬಂದಿಳಿದರು. ತಮ್ಮ ಅವಿವೇಕತೆಯಿಂದ ರಾಮಾಶಾಸ್ತ್ರಿಗಳನ್ನು ತಮ್ಮಲ್ಲಿಗೆ ಬರಮಾಡಿಕೊಂಡಿದ್ದರಿಂದ ಸಹೋದರರಿಬ್ಬರಿಗೂ ಬ್ರಹ್ಮಹತ್ಯದಷ್ಟು ವ್ಯಸನವಾಯಿತು; ಪಶ್ಚಾತ್ತಾಪಪಟ್ಟರು. ಶಾಸ್ತ್ರಿಗಳು ನಗುಮುಗದಿಂದ ಇಬ್ಬರಿಗೂ ಸಮಾಧಾನಪಡಿಸುತ್ತ

ಹೇಳಿದರು, "ನಿಮ್ಮಗಳ ಸುಖವೇ ನಮ್ಮ ಸುಖ; ನಿಮ್ಮ ಶ್ರೇಯಸ್ಸೇ ನಮ್ಮ ಶ್ರೇಯಸ್ಸು. ಮುಂದಿನ ಬೇಸಾಯಕ್ಕೆನ್ನೂ ಸಿದ್ಧಮಾಡಿಕೊಂಡಿಲ್ಲ. ನೀವಿಬ್ಬರೂ ಅರಿದವರಾದ್ದರಿಂದ ಜ್ಞಾಪಿಸಿ ಹೋಗೋಣವೆಂದು ಬಂದೆ. ಮನಸ್ಸಿನಲ್ಲೇನೂ ತಿಳಿಯಬೇಡಿ. ಒಂದುವೇಳೆ ನೀವು ಜಮೀನನ್ನು ಕೊಂಡುಕೊಳ್ಳದೇ ಹೋದರೆ ನನಗೆ ತಕ್ಕ ವ್ಯವಸ್ಥೆ ಮಾಡಿಕೊಳ್ಳಬೇಕಾ ಗುವುದು. ಬೇರೆಯವರು ಈ ಜಮೀನನ್ನು ಕೇಳುತ್ತಿದ್ದಾರೆ. ಅವರಿಗೆ ಕೊಡುವುದರಿಂದ ನನಗೆ ನಾಲ್ಕು ಕಾಸು ಹೆಚ್ಚು ಸಿಗುತ್ತದೆ. ಆದರೆ ನನಗೆ ಮುಖ್ಯ ಹಣವಲ್ಲ; ಜನ. ನಿಮ್ಮ ವಂಶದವರ ಆಸ್ತಿ ನಿಮ್ಮ ಕೈಗೆ ಬಂದರೆ ನನಗೆ ತುಂಬಾ ಸಂತೋಷ."

ರಾಮಾಶಾಸ್ತ್ರಿಗಳ ಮಾತಿಗೆ ಉತ್ತರ ಕೊಡುವ ಸಾಮರ್ಥ್ಯ ಅಣ್ಣ ತಮ್ಮಂದಿರಲ್ಲಿರಲಿಲ್ಲ. ಅವರ ಉಪಕಾರದಲ್ಲಿ ಮುಳುಗಿಹೋಗಿದ್ದರು. ಉಪ ಕಾರಕ್ಕೆ ತಕ್ಕ ಉಪಕಾರ ಮಾಡುವ ಸಾಮರ್ಥ್ಯವಿಲ್ಲದಿದ್ದರೂ ಉಪಕಾರ ಮಾಡಿದವನಿಗೆ ಧನ್ಯವಾದಗಳನ್ನರ್ಪಿಸುವುದು ಮನುಷ್ಯನ ಕರ್ತವ್ಯ. ಆದ್ದರಿಂದ ತಡವರಿಸುತ್ತಾ ಸುಬ್ಬಯ್ಯಗೌಡ ಹೇಳಿದ, "ನಿಮಗೆ ಇಲ್ಲಿಯ ವರೆಗೆ ಬರುವಂತೆ ಮಾಡಿದೆವು. ಏನಾದರೂ ಮಾಡಿ ಇನ್ನೊಂದು ವಾರ ದೊಳಗೆ ಜಮೀನನ್ನು ನಿಮ್ಮಿಂದ ಹೊಂದುವೆವು."

"ಆಗಲಿ ನಿಮ್ಮ ಮಾತಿಗೆ ವಿರುದ್ಧ ನಾನು ಹೋಗುವುದಿಲ್ಲ, ನನಗೆ ಮುಖ್ಯ ಹಣವಲ್ಲ; ಜನ. ನಿಮ್ಮ ಮಾತಿನ ಪ್ರಕಾರ ಮುಂದಿನ ಬುಧವಾರದ ವರೆಗೂ ನಿಮ್ಮ ನಿರೀಕ್ಷಣೆಯಲ್ಲಿರುವೆನು. ಅದರೊಳಗೆ ಬರದಿದ್ದರೆ ಗುರು ವಾರ ಬೇರೆಯವರಿಗೆ ಮಾತುಕೊಡುತ್ತೇನೆ. ತರುವಾಯ ನನ್ನನ್ನು ದೂರಬೇಡಿ. ನಿಮ್ಮ ವಂಶದವರ ಆಸ್ತಿ ನಿಮಗೆ ಬರಬೇಕೆಂದು ನನ್ನಿಚ್ಛೆ."

ಸುಬ್ಬಯ್ಯಗೌಡ ತಮ್ಮನ ಮುಖ ನೋಡಿದ; ಗುರಪ್ಪಗೌಡ ಅಣ್ಣನ ಮುಖ. ಸುಬ್ಬಯ್ಯಗೌಡ ಹೇಳಿದ "ಹಾಗೆ ಆಗಲಿ."

ಈಗ ಹೆಚ್ಚು ಸಾವಕಾಶಕ್ಕೆ ಅವಕಾಶವಿರಲಿಲ್ಲ; ಹಣ ಬೇರೆ ನೂರೈ ವತ್ತು ರೂಪಾಯಿ ಸಾಲಮಾಡಬೇಕು. ತರಾತುರಿ ಮಾಡದಿದ್ದರೆ ಜಮೀನು ಕೈತಪ್ಪುವ ಸಂಭವ. ಕೊನೆಯ ಗಳಿಗೆಯಲ್ಲಿ ಸಹೋದರರಿಬ್ಬರಿಗೂ ಶಂಕರಪ್ಪಗೌಡರ ಜ್ಞಾಪಕ ಬಂತು.

ಊರಿನಲ್ಲಿ ನೂರಾರು ಮಂದಿ ಸಾಹುಕಾರರಿದ್ದರೂ ಸುಬ್ಬಯ್ಯಗೌಡ, ಗುರಪ್ಪಗೌಡರ ತಂದೆ ಶಂಕರಪ್ಪಗೌಡರ ಹೆಸರಿಗೆ ನಂಬಿಕೆ ಕ್ರಯ ಮಾಡಿ ಕೊಟ್ಟಿದ್ದರಿಂದ ಮಕ್ಕಳಿಗೂ ಅವರ ಮೇಲೆ ನಂಬಿಕೆ ಬಂತು. ಅದಲ್ಲದೆ ತಂದೆಯ ಕಾಲಾನಂತರ ಇವರು ಹೋದಾಗ ಮೋಸಮಾಡಲು ಅವಕಾಶ ವಿದ್ದರೂ ಅದಕ್ಕೆ ಮನಸ್ಸುಮಾಡದೆ ನಿಜವಾದ ಲೆಕ್ಕಾಚಾರ ಮಾಡಿ ಕೊಟ್ಟಿದ್ದರಿಂದ ಅವರ ಮೇಲಿನ ನಂಬಿಕೆ ಹೆಚ್ಚಾಗಲು ಇನ್ನೊಂದು ಕಾರಣ ವಾಯಿತು. ಕೊನೆಗಳಿಗೆಯಲ್ಲಿ ಇದನ್ನೆಲ್ಲ ಯೋಚಿಸಿ ಸುಬ್ಬಯ್ಯಗೌಡ ಹೇಳಿದ, "ಯೋಚನೆಮಾಡುವುದಕ್ಕೆ ಹೆಚ್ಚು ಸಮಯವಿಲ್ಲ, ಸುಮ್ಮನೆ ಮಾಡುವುದರಿಂದ ಪ್ರಯೋಜನವೂ ಕಾಣಲಿಲ್ಲ. ಅಪ್ಪಯ್ಯ ಮೊದಲು ಶಂಕರಪ್ಪಗೌಡರಿಗೆ ನಂಬಿಕೆ ಕ್ರಯಪತ್ರ ಮಾಡಿಕೊಟ್ಟು ಸಾಲಮಾಡಿದ್ದರು. ಅದಲ್ಲದೆ ಅವರು ಎಲ್ಲರಿಗಿಂತ ನಂಬಿಕಸ್ತರು. ಶಾಸ್ತ್ರಿಗಳು ಅವರ ಹೆಸರಿಗೆ ಕ್ರಯಪತ್ರ ಮಾಡಿಕೊಡಲಿ. ನೂರು ರೂಪಾಯಿಯ ಸಾಲ ಬಾಕಿ ಇರು ವುದಲ್ಲದೆ ಇತರ ಬಾಬಿಗೂ ನೂರು ರೂಪಾಯಿಯ ಹತ್ತಿರ ಖರ್ಚಿಗೆ ಬೇಕಾಗುತ್ತದೆ. ಆದ್ದರಿಂದ ಇನ್ನೂರು ರೂಪಾಯಿ ಸಾಲ ಕೇಳೋಣ."

ತನ್ನ ಅಣ್ಣನ ಹೆಸರಿಗೆ ಕ್ರಯಪತ್ರವಾಗುವುದು ತಪ್ಪಿತಲ್ಲ ಎಂದು ಗುರಪ್ಪಗೌಡನಿಗೆ ಸಂತೋಷ. ಇಷ್ಟು ಸುಲಭದರಲ್ಲಿ ಇದರ ನಿರ್ಣಯ ವಾಗುವುದೆಂದು ಯಾರೂ ಯೋಚಿಸಿರಲಿಲ್ಲ. ಇದಕ್ಕಿಂತಲೂ ಆನಂದದ ವಿಚಾರ ಗುರಪ್ಪಗೌಡನಿಗೆ ಬೇಕಾಗಿಲ್ಲವಾದ್ದರಿಂದ ಒಂದು ರೀತಿಯಲ್ಲಿ ತೃಪ್ತಿ. ತೃಪ್ತಿ ನೆಲೆಸುವ ಮೊದಲು ಸಂಶಯ ತಲೆದೋರಿತು—ಇದೆಲ್ಲಾ ಮೋಸವೆ? ಇಲ್ಲ, ಶಂಕರಪ್ಪಗೌಡರು ತನ್ನ ಹೆಂಡತಿಯ ದೂರದ ಸಂಬಂಧಿ. ಸಂಶ ಯವೂ ಮಾಯವಾಗಿ, "ಅವನು ಹೇಳಿದ, ಹಾಗೆ ಆಗಲಿ."

ತಮ್ಮ ಇಷ್ಟುಬೇಗ ಒಪ್ಪುವನೆಂದ ಸುಬ್ಬಯ್ಯ ಯೋಚಿಸಿರಲಿಲ್ಲ. ಆದರೆ ಗುರಪ್ಪಗೌಡ ತಕ್ಷಣ ಒಪ್ಪಿಬಿಟ್ಟಿರುವುದರಿಂದ ಮಾತು ಬದಲಾ ಯಿಸದೆ ಅದನ್ನೇ ಸಬ್ಬಯ್ಯಗೌಡನು ಒಪ್ಪಿಕೊಳ್ಳಬೇಕಾಯಿತು.

ಅಣ್ಣ ತಮ್ಮರಿಬ್ಬರೂ ಶಂಕರಪ್ಪಗೌಡರ ಹತ್ತಿರ ಹೋಗಿ ವಿಚಾರ ವನ್ನೆತ್ತಿದರು. ಅವರೇ ಜಮೀನನ್ನು ನಂಬಿಕೆಕ್ರಯಕ್ಕೆ ಬರೆದುಕೊಡುವುದಕ್ಕೆ ಮುಂದೆ ಬಂದಿರುವಾಗ ಇನ್ನೂರುರೂಪಾಯಿ ಕೊಟ್ಟು ಬರೆಯಿಸಿಕೊಳ್ಳಲು

ಯಾವ ಸಾಹುಕಾರ ಒಪ್ಪುವುದಿಲ್ಲ? ವಾಯಿದೆಗಿಂತ ಮುಂಚೆಯೇ ರಾಮ ಶಾಸ್ತ್ರಿಗಳಿಂದ ಶಂಕರಪ್ಪಗೌಡರ ಹೆಸರಿಗೆ ನಂಬಿಕೆ ಕ್ರಯಪತ್ರವಾಯಿತು.

ಬರೆದುಕೊಟ್ಟವರು ರಾಮಶಾಸ್ತ್ರಿಗಳು; ಕ್ರಯಪತ್ರವಾಗಿದ್ದು ಶಂಕರಪ್ಪಗೌಡರಿಗೆ; ಕ್ರಯಪತ್ರಕ್ಕೆ ಸಂಬಂಧಪಟ್ಟ ಛಾಪಾಕಾಗದ ಇತ್ಯಾದಿಗಳ ಖರ್ಚನ್ನು ಕೊಟ್ಟವರು ಸುಬ್ಬಯ್ಯಗೌಡ, ಗುರಪ್ಪಗೌಡ. ಕ್ರಯಪತ್ರದ ಖರ್ಚನ್ನು ಕೊಟ್ಟದಲ್ಲದೆ ಅವರು ಕ್ರಯಪತ್ರಕ್ಕೆ ಸಾಕ್ಷಿ ಹಾಕಿದರು.

ಈ ರೀತಿ ಅಣ್ಣೀಮುಕ್ಕಿಯರ ಜಮೀನು ಒಂದು ಸುತ್ತು ತಿರುಗಿ, ಪುನಾ ಶಂಕರಪ್ಪಗೌಡರ ಹತ್ತಿರ ಬಂತು. ಮೊದಲು ಶಂಕರಪ್ಪಗೌಡರು ನೂರು ರೂಪಾಯಿ ಸಾಲ ಕೊಟ್ಟಿದ್ದರು, ಈಗ ಮಾತನಾಡಿದ್ದು ಇನ್ನೂರು ರೂಪಾಯಿಯಾದರೂ ನೂರೈವತ್ತು ರೂಪಾಯಿಯನ್ನು ಮಾತ್ರ ಕೊಟ್ಟಿದ್ದರು. ಐವತ್ತು ರೂಪಾಯಿ ಇನ್ನೂ ಕೊಟ್ಟಿರಲಿಲ್ಲ.

ಕ್ರಯಪತ್ರಕ್ಕೆ ಸುಬ್ಬಯ್ಯಗೌಡ, ಗುರಪ್ಪಗೌಡ ಸಾಕ್ಷಿಹಾಕಿ ಮನೆಗೆ ಬಂದಾಗ ಮನಸ್ಸಿಗೆ ನೆಮ್ಮದಿ ಇಲ್ಲದಿದ್ದರೂ ಚಿಂತೆ ಕಡಮೆಯಾಗಿತ್ತು. ಬೇಸಾಯದ ಕಾಲವಾದ್ದರಿಂದ ಬೇರೆಯೆಲ್ಲಾ ಯೋಚನೆಯನ್ನು ಬಿಟ್ಟು ಗದ್ದೆ ಕೆಲಸವನ್ನಾರಂಭಿಸಿದರು. ಜಮೀನು ತಮ್ಮದೆಂಬ ಭಾವನೆಯಿಂದ ಬೇಸಾಯ ಮಾಡುತ್ತಿದ್ದರೂ ಮೊದಲಿನ ಹುಮ್ಮಸಿರಲಿಲ್ಲ. ಯಂತ್ರದಂತೆ. ಬೇಸಾಯದ ಕಾರ್ಯಗಳು ನಡೆದವು. ಬೇಸಾಯ ಮುಗಿಯುವ ಹೊತ್ತಿಗೆ ಗೌರಿಗಣೇಸನ ಹಬ್ಬ ಬಂತು.

ರೈತರಿಗೆ ಗೌರಿಹಬ್ಬ ಬಹಳ ವಿಶೇಷವಾದ್ದರಿಂದ ಖರ್ಚಿಗೆ ಹಣ ತರಲು ಸುಬ್ಬಯ್ಯಗೌಡ ಶಂಕರಪ್ಪಗೌಡರ ಮನೆಗೆ ಹೋದ. ಶಂಕರಪ್ಪ ಗೌಡರು ಮನೆಯಲ್ಲಿದ್ದರು. ಬೇಸಾಯ ಬಿತ್ತನೆಯ ಮಾತು ಮುಗಿದ ತರುವಾಯ ಸುಬ್ಬಯ್ಯಗೌಡ ಹೇಳಿದ "ಹಬ್ಬಬಂತು, ಬರಿಕೈಯಾಗಿದೆ; ಮಾತನಾಡಿದ ಪ್ರಕಾರ ಇನ್ನು ಐವತ್ತು ರೂಪಾಯಿ ನಮಗೆ ಸಲ್ಲಬೇಕು."

"ಮಾತಿಗೆ ನಾನು ತಪ್ಪುವುದಿಲ್ಲ; ಗುರಪ್ಪಗೌಡನನ್ನು ಕರೆದುಕೊಂಡು ಬಾ, ಬೇಕಾದರೆ ಐವತ್ತು ರೂಪಾಯಿಯನ್ನೂ ಕೊಡುತ್ತೇನೆ" ಶಂಕರಪ್ಪಗೌಡರು ಹೇಳಿದರು.

ತಾನೇ ತಾನಾಗಿ ಮೆರೆದು, ಆಡಳಿತವನ್ನು ನಿರ್ವಹಿಸಿದ್ದ ಸುಬ್ಬಯ್ಯ ಗೌಡನ ಮುಖ ಬೆಳ್ಳಗಾಯಿತು. ತಾನು ಅಪರಾಧಿಯಾಗಿ ನಿಂತಿರುವಂತೆ ಕಾಣಿಸಿತು. ತಮ್ಮನ ಜಮಾಖರ್ಚು ದುಡಿಯುವುದಕ್ಕೆಂದು ನೆನಸಿದ್ದ ಇವನಿಗೆ ತನ್ನಂತೆ ಅವನೂ ಸರಿಮಾನವಾಗುತಿರುವ ವಿಚಾರ ಪ್ರತ್ಯಕ್ಷ ವೇದ್ಯವಾಯಿತು. ತಮ್ಮನ ಮೇಲೆ ಕೋಪವಾಗಲಿ, ಮತ್ಸರವಾಗಲಿ ಹುಟ್ಟಲಿಲ್ಲ, ಕೋಪವುಂಟಾದುದು ಶಂಕರಪ್ಪಗೌಡರ ಮೇಲೆ. ತಾನು ಹಿರಿಯನು, ಯಜಮಾನ; ನನಗೆ ತಮ್ಮನನ್ನು ಕರೆದುಕೊಂಡು ಬಾ ಎಂದು ಹೇಳುತಿದಾರಲ್ಲ ಎಂದುಕೊಂಡ. ತನ್ನ ಆತ್ಮಗೌರವವನ್ನು ಕಳೆದುಕೊಂಡಿದ್ದ ವೀರನಂತೆ ನುಡಿದ, "ಇನ್ನು ನಾಲ್ಕೈದು ದಿವಸ ಅವನಿಗೆ ಬರುವುದಕ್ಕಾಗುವುದಿಲ್ಲ. ನಾಳೆಯೇ ಸಂತೆ; ಇವತ್ತೇ ಕೊಟ್ಟದ್ದರೆ ಆಗುತ್ತಿತ್ತು."

"ನೀವು ಇವತ್ತೇ ರಾತ್ರಿ ಬನ್ನಿ, ಕೊಡುತ್ತೇನೆ. ನಿಮಗೂ ಹಬ್ಬಕ್ಕೆ ತೊಂದರೆಯಾಗಬಾರದು. ಹಾಗಿದ್ದರೆ ಬೇಗಹೋಗಿ ಕರೆದುಕೊಂಡು ಬನ್ನಿ."

ಸುಬ್ಬಯ್ಯಗೌಡ ಕೋಪನುಂಗಿ ಸುಮ್ಮನಾದ. ಈ ಸಾರಿ ತನ್ನ ಮೇಲೆ ತನಗೆ ಸಿಟ್ಟುಬಂತು. ಅವನ ಕೋಪಕ್ಕೆ ಬೆಲೆ ಕೊಡುವವರು ಯಾರು? ತನ್ನ ಯಜಮಾನಿಕೆಯ ಮಾನರಕ್ಷಣೆಗೆ ಹೇಳಿದ, "ಸಾಯಂಕಾಲ ದನ ಕರುಗಳನ್ನು ಕಟ್ಟಬೇಕು, ಹೆಂಗಸರು ಮಕ್ಕಳಿಂದಾಗುವುದಿಲ್ಲ. ಮನೆಕಡೆ ನಾನಿರಬೇಕು. ಅಥವಾ ನಮ್ಮ ಗುರಪ್ಪನಿರಬೇಕು."

"ಹಾಗಾದರೆ ನನಲ್ಲಿ ನಂಬಿಕೆ ಇದ್ದರೆ ನಾನೊಂದು ಉಪಾಯ ಹೇಳುತ್ತೇನೆ. ನಿಮಗೆ ಮನಸ್ಸಿದ್ದರೆ ಹಾಗೆ ಮಾಡಿ."

ಮಧ್ಯದಲ್ಲಿ ಸುಬ್ಬಯ್ಯಗೌಡ ಬಾಯಿಹಾಕಿದ:

"ಎಂಥಾ ಮಾತನಾಡುತಿದ್ದೀರಿ? ನಿಮ್ಮಲ್ಲಿ ನಂಬಿಕೆಯಿಲ್ಲವೆ."

"ಲೆಕ್ಕ ಎಂದರೆ ಲೆಕ್ಕ. ನಾನು ಹೇಗೆ ನಿಮಗೆ ಹೇಳುತಿದ್ದೇನೆ ಹಾಗೆಯೇ ನೀವೂ ಯೋಚಿಸಬಹುದು. ನಿಮ್ಮಲ್ಲಿ ನನಗೆ ನಂಬಿಕೆ ಇಲ್ಲವೆಂದು ನಿಮ್ಮ ತಮ್ಮನನ್ನು ಕರೆದುಕೊಂಡು ಬರುವುದಕ್ಕೆ ಹೇಳಲಿಲ್ಲ. ಇದು ನಿಮ್ಮ ಅಣ್ಣತಮ್ಮರ ಲೆಕ್ಕ. ನಾಳೆ ಅವನು ಬಂದು—ನನ್ನ ಕೇಳದೆ ಏಕೆ ಕೊಟ್ಟರೆಂದರೆ ನನಗೆ ಉತ್ತರ ಕೊಡುವುದಕ್ಕೆ ಬಾಯಿಯಿರುವುದಿಲ್ಲ.

ಬೇಕಾದರೆ ನೀವು ರುಜುಮಾಡಿ ಹೋದರೆ, ಅವನ ಕೈಯಲ್ಲಿ ಹಣ ಕಳುಹಿಸಿ ಕೊಡುತ್ತೇನೆ."

ಆ ಗಳಿಗೆಯಲ್ಲಿ ಸುಬ್ಬಯ್ಯಗೌಡನಿಗೆ ಮಾನ ಉಳಿದಹಾಗಾಯಿತು, ರುಜುಮಾಡಿ ಮನೆಗೆ ಬಂದ. ಮನೆಗೆ ಬಂದವನು ತಮ್ಮನ ಹತ್ತಿರ ಈ ಪೂರ್ವೋತ್ತರವನ್ನು ವಿವರಿಸದೆ ಹೇಳಿದ, "ನಿನ್ನ ಶಂಕರಪ್ಪಗೌಡರು ಬರಲು ಹೇಳಿದಾರೆ."

ಈ ಮಾತು ಕೇಳಿದ ತರುವಾಯ ಗುರಪ್ಪಗೌಡನಿಗೆ ಶಂಕರಪ್ಪಗೌಡರ ಮನೆಗೆ ಹೋಗುವವರೆಗೂ ಸಮಾಧಾನವಿರಲಿಲ್ಲ. ದನಕರುಗಳನ್ನು ಕಟ್ಟಿದವನು ಅದೇಮುಖ ಶಂಕರಪ್ಪಗೌಡರಲ್ಲಿಗೆ ಹೋದ. ಅಲ್ಲಿಗೆ ಹೋದ ಮೇಲೆ ಅವನಿಗೆ ವಿಚಾರವೆಲ್ಲ ತಿಳಿಯಿತು. ಇದರಿಂದ ಅವನಿಗೆ ಅಪಾರವಾದ ಆನಂದವೂ ಶಂಕರಪ್ಪಗೌಡರ ಮೇಲೆ ಅಭಿಮಾನವೂ ಹುಟ್ಟಿತು. ತಾನು ಒಬ್ಬ ಮನುಷ್ಯನಾದೆನೆಂಬ ಸ್ವಾಭಿಮಾನವು ಅಂಕುರಿಸಿತು. ಸುಬ್ಬಯ್ಯಗೌಡ ಐವತ್ತು ರೂಪಾಯಿಗೂ ರುಜುಮಾಡಿದ್ದ. ಅದನ್ನು ನೋಡಿ ಸ್ವಾಭಿಮಾನದಿಂದ ಗುರಪ್ಪಗೌಡ ಹೇಳಿದ, "ಹೆಂಗಸರು ಮಕ್ಕಳಿಗೆ ಬಟ್ಟೆಬರೆ ಸಹ ತರುವುದಿಲ್ಲ. ಸುಮ್ಮನೆ ಏಕೆ ಇಷ್ಟು ಹಣ? ಇಪ್ಪತ್ತು ರೂಪಾಯಿ ಸಾಕು ಹಬ್ಬದ ಖರ್ಚಿಗೆ."

ಲೆಕ್ಕದ ಪುಸ್ತಕದ ಹಾಳೆಯನ್ನು ತಿರುಗಿಸುತ್ತಾ ಶಂಕರಪ್ಪಗೌಡರು ಹೇಳಿದರು, "ಹಾಗೆ ಮಾಡು"

ತರುವಾಯ ಐವತ್ತು ರೂಪಾಯಿಯನ್ನು ಹೊಡೆದು, ಇಪ್ಪತ್ತು ರೂಪಾಯಿ ಮಾಡಿದರು. ಗುರಪ್ಪಗೌಡ ರುಜುಮಾಡಿ ಇಪ್ಪತ್ತು ರೂಪಾಯಿಗಳನ್ನು ತೆಗೆದುಕೊಂಡು ಮಾರನೆಯ ದಿನ ಬೆಳಗ್ಗೆ ಮನೆಗೆ ಹೊರಟ.

ಅವನ ಜೋಬಿನಲ್ಲಿದ್ದ ಹಣ ಕೇವಲ ಇಪ್ಪತ್ತು ರೂಪಾಯಿಯಾದರೂ ಅದೇ ಕುಬೇರನ ಸಂಪತ್ತು ಸಿಕ್ಕಿದ ಹಾಗಿತ್ತು. ಅದಕ್ಕೆ ಹಣದ ಬೆಲೆ ಕಾರಣವಲ್ಲ, ಮನೆಯ ಆಡಳಿತದಲ್ಲಿ ತನಗೂ ಅಧಿಕಾರವಿದೆಂಬ ಸ್ವಾಭಿಮಾನ. ಅಣ್ಣಯ್ಯ ಬರೆಯಿಸಿದ್ದ ಐವತ್ತು ರೂಪಾಯಿ ಹೊಡೆಯಿಸಿ ಇಪ್ಪತ್ತು ರೂಪಾಯಿ ಮಾಡಿಸಿದೆನಲ್ಲ ಎಂಬ ಸಂತೋಷ.

## ಏಳು

ಶಂಕರಪ್ಪಗೌಡರ ಮನೆಯಿಂದ ಬಂದ ರಾತ್ರಿ ಸುಬ್ಬಯ್ಯಗೌಡ ಸರಿಯಾಗಿ ನಿದ್ದೆ ಮಾಡಲಿಲ್ಲ. ಯಜಮಾನನಾದ ತನ್ನ ಮಾತನ್ನು ನಿರ್ಲಕ್ಷಿಸಿ ತಮ್ಮನ ಕೈಯ್ಯಲ್ಲಿ ಹಣ ಕೊಡುತ್ತೇನೆಂದು ಹೇಳಿದ ಮಾತು ಅವನ ಮನಸ್ಸನ್ನು ಕುಕ್ಕುತಿತ್ತು.

ಗುರಪ್ಪಗೌಡನ ಹೆಂಡತಿಯ ಬಳಗದ ಕಡೆಯವರು ಶಂಕರಪ್ಪಗೌಡರು. ಅವನನ್ನೇ ಯಜಮಾನನನ್ನಾಗಿ ಮಾಡುವುದಕ್ಕೋಸ್ಕರ ಹೀಗೆಲ್ಲ ಮಾಡುತಿರುವುದು. ಎಲ್ಲಿಯಾದರೂ ಜಮೀನನ್ನು ಗುರಪ್ಪನ ಹೆಸರಿಗೆ ಕ್ರಯಪತ್ರ ಮಾಡಿಬಿಟ್ಟರೆ ಅವನ ಕೈಕೆಳಗಿರಬೇಕಾಗುವುದಲ್ಲಾ.

ಬೆಳಗ್ಗೆ ಗುರಪ್ಪಗೌಡ ಬರುವಾಗ ಸುಬ್ಬಯ್ಯಗೌಡ ಜಗುಲಿಯ ಮೇಲೆ ಕುಳಿತಿದ್ದ. ಗುರಪ್ಪಗೌಡನ ಮುಖ ಅರಳಿತ್ತು, ಕಾಲು ಕುಣಿಯುತಿತ್ತು. ಜಗುಲಿಯ ಮೇಲೆ ಕುಳಿತಿದ್ದ ಸುಬ್ಬಯ್ಯಗೌಡ ತಮ್ಮನನ್ನು ನೋಡಿ ಯಜಮಾನಿಕೆಯ ಗಾಂಭೀರ್ಯವನ್ನು ತಾಳಿದ. ಗುರಪ್ಪಗೌಡ ಬಂದ ಹೆಜ್ಜೆಯಲ್ಲೇ ಅಣ್ಣನ ಹತ್ತಿರ ಹೋಗಿ, ಜೋಬಿನಿಂದ ಐದು ರೂಪಾಯಿ ನಾಲ್ಕು ನೋಟುಗಳನ್ನು ಕೊಟ್ಟ. ಸುಬ್ಬಯ್ಯಗೌಡ ಅತ್ಯಂತ ಉದಾಸೀನತೆಯಿಂದ ಕೈನೀಡಿ, ನೋಟುಗಳನ್ನು ತೆಗೆದುಕೊಂಡು ಎಣಿಸಿದ. ನಾಲ್ಕೇ ನೋಟು. ತಪ್ಪಾಗಿರಬಹುದೆಂದು ಇನ್ನೊಂದು ಸಾರಿ ಎಣಿಸಿದ, ಆಗಲೂ ನಾಲ್ಕೇ. ಗುರಪ್ಪನ ಮುಖವನ್ನು ನೋಡಿ, "ಇದೇನಿದು ಇಪ್ಪತ್ತು ರೂಪಾಯಿಗಳಿವೆಯಲ್ಲ!" ಎಂದು ಕೇಳಿದ.

ಅತ್ಯಂತ ಉತ್ಸಾಹ, ಹುರುಪು, ಸಂತೋಷದಿಂದ ಗುರಪ್ಪಗೌಡ ಹೇಳಿದ, "ಇನ್ನೂ ಹಬ್ಬ ಇವೆಯಲ್ಲ, ಒಂದೇ ಹಬ್ಬಕ್ಕೇತಕ್ಕೆ ಐವತ್ತು ರೂಪಾಯಿಯೆಂದು ನಾನೇ ಇಪ್ಪತ್ತು ರೂಪಾಯಿ ಸಾಕೆಂದು ತಂದೆ."

ಮೂಗಿಲ್ಲದ ಸಿಂಡನಂತೆ ಕುಳಿತಿದ್ದ ಸುಬ್ಬಯ್ಯಗೌಡನ ಮುಖಕ್ಕೆ ಕನ್ನಡಿ ಹಿಡಿದ ಹಾಗಾಯಿತು. ಕೈಯ್ಯಲ್ಲಿದ್ದ ನೋಟುಗಳನ್ನು ಎಸೆದು ಹೇಳಿದ, "ಇದನ್ನೂ ತೆಗೆದುಕೊಂಡು ಹೋಗಿ ಕೊಟ್ಟುಬಾ ದೀಪಾವಳಿ ಹಬ್ಬಕ್ಕೆ ಹೋಳಿಗೆಗಾಗುತ್ತದೆ. ನನಗೆ ಬುದ್ಧಿಯಿಲ್ಲದೆ ಐವತ್ತು ರೂಪಾಯಿ ಬರೆದುಬಂದೆನೆಂದು ಮಾಡಿಕೊಂಡೆಯಾ! ಹಬ್ಬದ ಖರ್ಚಿಗೆಂದು ಕೇಳು

ವುದು ವಾಡಿಕೆ, ಹೋಳಿಗೆ, ಕೀರು ಮಾಡಿಕೊಂಡು ತಿನ್ನುವುದಕ್ಕಲ್ಲ. ಅಡಕೆ ತೋಟಕ್ಕೆ ಔಷಧಿ ಹಾಕುವವರಿಗೇನುಮಾಡುತ್ತೀ? ಸಸಿಹಾಕುವುದು ಅಷ್ಟೈರಾಯಿತೆಂದು ಬೈಲುಕೊಡಿಗೆಯಿಂದ ಸಸಿ ತಂದಿವಲ್ಲ ಅದಕ್ಕೇನು ಮಾಡುವೇ?"

ಗುರಪ್ಪಗೌಡನ ಹುರುಪು, ಉತ್ಸಾಹವೆಲ್ಲ ಮಣ್ಣಾಗೂಡಿತು. ಅಣ್ಣನ ಈ ತರದ ಅಸಭ್ಯತೆ ಅವನನ್ನು ಉದ್ರೇಕಗೊಳಿಸಿತು. ಒಂದು ವೇಳೆ ತಂದ ಹಣ ಕಡಮೆಯಾದರೆ ತಿರುಗಿ ಹೋಗಿ ತರಬಹುದು. ಅದ ಕ್ಕೋಸ್ಕರ ನೋಟುಗಳನ್ನು ಕಾಲುಮುಂದೆಸೆದು ಕಂಡಾಬಟ್ಟೆ ಹೇಳುವಂಥ ಅಪರಾಧ ಮಾಡಿದೆನೇ ಎಂದುಕೊಂಡು ಹೇಳಿದ, "ಬೈಲುಕೊಡಿಗೆಯಿಂದ ಸಸಿ ತಂದಿದ್ದು ದುಡ್ಡಿಗಲ್ಲ, ಭತ್ತಕೆಂದು ಮಾತಾಗಿದೆ."

"ಆಗಲಿ, ಭತ್ತವೇ ಆಗಲಿ. ಸಾಹುಕಾರರಿಗೆ ದುಡ್ಡು ಸೇರಿದಷ್ಟು ಆಶೆ ಹೆಚ್ಚಾಗುತ್ತಾ ಹೋಗುತ್ತದೆ. ಇನ್ನೂರು ರೂಪಾಯಿಗೆ ಜಮೀನ ನ್ನೆಲ್ಲ ನಂಬಿಕೆ ಕ್ರಯ ಮಾಡಿಕೊಟ್ಟು ಎರಡು ತಿಂಗಳಾಗುತ್ತಾ ಬಂತು. ದುಡ್ಡು ಮಾತ್ರ ಇನ್ನೂ ಕೊಡಲಿಲ್ಲ. ಅವರಿಗೆ ಇಲ್ಲಿಯೂ ಬಡ್ಡಿ ಬರಬೇಕು ಅಲ್ಲಿಯೂ ಬಡ್ಡಿ ಉಳಿಯಬೇಕು. ಎಷ್ಟುಸಾರಿ ಅವರ ಮನೆಗಲಯಬೇಕು."

ಶಂಕರಪ್ಪಗೌಡರ ಮೇಲೆ ಅಭಿಮಾನವಿದ್ದ ಗುರಪ್ಪಗೌಡನಿಗೆ ಅಣ್ಣನ ಮಾತನ್ನು ಕೇಳಿ ತುಂಬಾ ಅಸಮಾಧಾನವಾಯಿತು. ಅದಲ್ಲದೆ ಮಾತಿನಿಂದ ಮಾತಿಗೆ, ಹಾರುತಿದ್ದಾನೆ. ಹಣಕ್ಕೋಸ್ಕರ ಶಂಕರಪ್ಪಗೌಡರ ಮನೆಗೆ ಅಲೆದಿದ್ದ ಒಂದುಸಾರಿಯ ಜ್ಞಾಕಪವೂ ಗುರಪ್ಪಗೌಡನಿಗಿಲ್ಲ. ಹಣವನ್ನು ತೆಗೆದುಕೊಂಡು ಹೋಗುವಂತೆ ಅವರು ಕೊಟ್ಟರೂ ತಾನೇ ತರದೆ ಬಂದಿದ್ದರೂ ಹೀಗೆ ಮಾತನಾಡುತಿರುವುದರ ಅರ್ಥವಾಗಲಿಲ್ಲ. ಇಲ್ಲದವರ ಪಕ್ಷ ಇದ್ದವರು ವಹಿಸಿಕೊಂಡು ಮಾತನಾಡುವುದು ಧರ್ಮವಾದ್ದ ರಿಂದ ತನ್ನ ವಿಚಾರವನ್ನು ಬಿಟ್ಟು ಶಂಕರಪ್ಪಗೌಡರ ವಿಚಾರದಲ್ಲಿ ಗುರಪ್ಪ ಗೌಡ ಹೇಳಿದ, "ದುಡ್ಡಿಗೋಸ್ಕರ ಅವರ ಮನೆಗೆ ಅಲೆದಿದ್ದು ನನಗೆ ಒಂದುಸಾರಿಯೂ ಜ್ಞಾಪಕವಿಲ್ಲ. ಹಣಕೊಟ್ಟರೂ ನಾನೇ ತರಲಿಲ್ಲ; ಇದ ರಲ್ಲಿ ಅವರ ತಪ್ಪೇನಿದೆ."

ಇವನೂ, ಶಂಕರಪ್ಪಗೌಡರೂ ಒಂದಾಗಿದ್ದಾರೆಂಬ ಮಾತು ಇದರಿಂದ ಸುಬ್ಬಯ್ಯಗೌಡನಿಗೆ ನಿಶ್ಚಯವಾಯಿತು. ಇನ್ನು ಶಂಕರಪ್ಪಗೌಡರ ವಿರುದ್ಧ ಮಾತನಾಡುವುದರಿಂದ ತನಗೆ ಅಹಿತವಾಗಬಹುದೆಂದು ಆ ಮಾತನ್ನು ಅಲ್ಲಿಗೆ ನಿಲ್ಲಿಸಿದ. ಸುಬ್ಬಯ್ಯಗೌಡ ಮಾತನ್ನು ನಿಲ್ಲಿಸಿದರೂ ಗುರಪ್ಪ ಗೌಡ ನಿಲ್ಲಿಸಬೇಕಲ್ಲ? ಅವನು ಕೇಳಿದ, "ಹಾಗಾದರೆ ಹೋಗಿ ಎಲ್ಲಾ ರೂಪಾಯಿ ತರಲೇ?"

"ಹೂಂ! ನಿನ್ನೊಬ್ಬನಿಗೆ ಅವರು ಕೊಟ್ಟಾರು? ಈಗ ತಂದಾಯಿತಲ್ಲ ಅದರಲ್ಲಿಯೇ ಹೇಗಾದರು ನಿರ್ವಹಿಸಬೇಕು."

ಈ ನಿರ್ವಹಿಸುವುದು ಗುರಪ್ಪಗೌಡನಿಗೆ ಬೇಕಿರಲಿಲ್ಲ. ಇದುವರೆಗೂ ಹಾರಾಡಿದ ರಭಸವೇನು? ಈಗ ನಿರ್ವಹಿಸುವ ಮಾತೇನು? ಗುರಪ್ಪ ಗೌಡ ಹೇಳಿದ, "ಅಡಕೆತೋಟಕ್ಕೆ ಔಷಧಿ ಹಾಕುವವರಿಗೇನು ಮಾಡುವೆ?"

"ಅದನ್ನೇ ಯೋಚಿಸುತ್ತಿದೇನೆ. ಹಾಗೆಲ್ಲ ಅವರ ಮಾತನ್ನು ಕಿವಿಯಮೇಲೆ ಹಾಕಿಕೊಳ್ಳಬಾರದು. ಆ ನೋಟನ್ನು ಹೆರಕಿ ಕೊಡು" ಎಂದು ಸಮಾಧಾನದ ಧ್ವನಿಯಲ್ಲಿ ಸುಬ್ಬಯ್ಯಗೌಡ ಹೇಳಿದ.

ಗೌರಿ, ಗಣೇಶನ ಹಬ್ಬ ಬಂತು, ಇದರಿಂದ ಜನರಲ್ಲಿ ಹುರುಪಾಗಲಿ, ಹೊಸ ಭಾವನೆಯಾಗಲಿ ಉದಯವಾಗಲಿಲ್ಲ; ಅವುಗಳನ್ನು ತರುವುದೂ ಇಲ್ಲ. ಒಂದಾನೊಂದು ಕಾಲದಲ್ಲಿ ಹಬ್ಬಗಳಿಂದ ಸಮಾಜಕ್ಕೆ ಅತ್ಯುತ್ತಮ ಉಪಕಾರವಿದ್ದರೂ ಇರಬಹುದು, ಈಗ ಭಾರವಾಗಿದೆ. ಪ್ರತಿತಿಂಗಳ ಮೊದಲನೆಯ ತಾರೀಖು ಕೆಲಸಮಾಡಲಿ, ಮಾಡದಿರಲಿ ಸಂಬಳ ಎಣಿಸುವ ನೌಕರರಿಗೆ ಒಂದು, ಒಂದೂವರೆ ದಿನ ರಜ ಸಿಗುತ್ತದೆ; ಬೇಕಾದ ತಿಂಡಿ ಮಾಡಿ ತಿನ್ನಲು ಪ್ರತಿ ತಿಂಗಳಲ್ಲಿಯೂ ಸಂಬಳ ಸಿಗುತಿರುತ್ತದೆ. ರೈತಾಪಿ ಜನರಿಗೆ ಹಬ್ಬಗಳು ಖರ್ಚಿನ ಬಾಬುಗಳಾಗಿ ಅವರನ್ನು ನೆಲಸಮ ಮಾಡುವುದರಲ್ಲಿ ನಿರತವಾಗಿವೆ. ಹಬ್ಬದ ದಿನದಲ್ಲಿಯೂ ಆನಂದದಿಂದ ಮನೆಯಲ್ಲಿರುವ ಭಾಗ್ಯ ಅವರು ಪಡೆದುಕೊಂಡು ಬಂದಿಲ್ಲ.

ತಿಂಗಳು, ತಿಂಗಳು ಸಂಬಳ ಪಡೆಯುವವರು, ಅವರ ಮನೆಯ ಹೆಂಗಸರು ಮಕ್ಕಳು ಮಿಂದು, ಗಂಡಸರು ರೇಶ್ಮೆಯ ಪಂಚೆ, ಶಲ್ಯಗಳನ್ನೂ ಹೆಂಗ

ಸರು ರೇಶ್ಮೆ ಸೀರೆ ಕುಪ್ಪಸವನ್ನೂ ಧರಿಸಿಕೊಂಡು ದೇವಸ್ಥಾನಗಳಿಗೆ ಹೋಗುತ್ತಿದ್ದರು. ಕೆಲವರು ಬಗೆಬಗೆಯ ಭಕ್ಷಭೋಜ್ಯಕ್ಕೆ ಸಲಕರಣೆ ಸಿದ್ಧಮಾಡುತ್ತಿದ್ದರು. ರೈತರಿಗೆ ಕೆಲಸಮಾಡಬೇಕೆಂದು ಮನಸ್ಸು, ಆದರೆ ಭೂಮಿಯನ್ನು ಗಾಯಪಡಿಸುವ ಹಾಗಿಲ್ಲ. ಸುಬ್ಬಯ್ಯಗೌಡ, ಗುರಪ್ಪ ಗೌಡ ಮನೆಯ ಕೆಲಸಕಾರ್ಯವನ್ನು ಮಾಡಿಕೊಂಡು ಮನೆಯಲ್ಲಿದ್ದರು. ಅಂದು ಗೌರಿಯ ಹಬ್ಬವಾದ್ದರಿಂದ ಕಣ್ಣೀಮಕ್ಕಿಯಲ್ಲಿ ಅನ್ನದ ಜೊತೆ ಯಲ್ಲಿ ಪಲ್ಯವೊಂದನ್ನು ಊಟಕ್ಕೆ ಮಾಡಿದ್ದರು. ಸಹೋದರರಿಬ್ಬರು ಊಟ ಮುಗಿಸಿಕೊಂಡು ಜಗುಲಿಯ ಮೇಲೆ ಬಂದರು. ಸುಬ್ಬಯ್ಯಗೌಡ ಹೇಳಿದ, "ಇನ್ನೂರು ರೂಪಾಯಿ ಸಾಲಕ್ಕೆ ಆಸ್ತಿಯನ್ನೆಲ್ಲ ನಂಬಿಕೆಯ ಕ್ರಯ ಮಾಡಿಕೊಟ್ಟಿರುವರೆಂದು ಜನರೆಲ್ಲ ನಗುತಿದ್ದಾರೆ. ಮೊನ್ನೆ ನೀನು ಶಂಕರಪ್ಪಗೌಡರಿಂದ ಪೂರಾರುಪಾಯಿಯನ್ನೂ ತರದೆ ಒಳ್ಳೆಯದನ್ನು ಮಾಡಿದೆ, ತಂದ ಇಪ್ಪತ್ತು ರೂಪಾಯಿಯನ್ನೂ ಹಬ್ಬಕ್ಕೆ ಖರ್ಚುಮಾಡದೆ ಹಾಗೆಯೇ ಇಟ್ಟಿರುವೆನು. ಏನಾದರೂ ಮಾಡಿ ಇನ್ನೂರು ರೂಪಾಯಿ ಮಾಡಿ ಜಮೀನನ್ನು ಬಿಡಿಸಿಕೊಳ್ಳಬೇಕು."

ತಕ್ಷಣ ಗುರಪ್ಪಗೌಡ ಹೇಳಿದ, "ಕ್ರಯಪತ್ರಕ್ಕೆ ಐವತ್ತು ರೂಪಾಯಿ ಹತ್ತಿರ ಖರ್ಚಾಗುತ್ತದೆಯಲ್ಲ."

"ಹೌದು, ಇನ್ನೂರು ರೂಪಾಯಿಯಲ್ಲಿ ಎಲ್ಲ ಆಗುತ್ತದೆ."

"ಅಷ್ಟು ಹಣ ಎಲ್ಲಿಂದ ಬರುತ್ತದೆ?"

"ಏನಾದರೂ ಮಾಡಬೇಕು. ಎಲ್ಲಿಂದ ಬರುತ್ತದೆಂದು ಕುಳಿತು ಕೊಂಡರೆ ಬರುತ್ತದೆಯೆ!"

"ಈ ವರ್ಷದ ಪೈರನ್ನು ಮಾರಿದರೆ ಸಾಧ್ಯವಾಗುವುದು."

"ಪೈರನ್ನು ಮಾರಿದರೆ, ಹೆಂಗಸರು ಮಕ್ಕಳಿಗೇನುಮಾಡುವುದು? ಒಂದು ವರ್ಷ ಜೀವದಿಂದಿರಬೇಕಲ್ಲ."

"ಇದ್ದ ದನಕರ, ಗಾಡಿ ಎತ್ತುಗಳನ್ನೆಲ್ಲ ಮಾರಿಯಾಯಿತು. ನನಗೆ ಬೇರೆ ಯಾವಮಾರ್ಗವೂ ಕಾಣುವುದಿಲ್ಲ."

"ಅಪ್ಪಯ್ಯ ಮನೆಯಲ್ಲಿ ಹೆಂಗಸರಿಬ್ಬರಿಗೂ ಬುಗುಡಿ, ಬಿಚ್ಚೋಲೆ, ಚಂದ್ರಮುರ ಮಾಡಿಸಿದ್ದ. ಇಬ್ಬರ ಕೈಯಿಂದಲೂ ತೆಗೆದುಕೊಂಡು ಮಾರಿ

ದರೆ ಸಾಕಾಗಬಹುದು. ಒಂದುವೇಳೆ ಅದು ಕಡಮೆಬಂದರೆ ಹುಬ್ಬಳ್ಳಿ ತಾಮ್ರದ ಹಂಡೆಯನ್ನೂ ಮಾರಿಬಿಡೋಣ."

"ಮದುವೆಯಲ್ಲಿ ಕೊಟ್ಟದ್ದನ್ನು ಹೆಂಗಸರು ಎಲ್ಲಿಯಾದರೂ ಕೊಡುವರೆ?"

ಸುಬ್ಬಯ್ಯಗೌಡ ಸಿಕ್ಕಿಬಿದ್ದಿದ್ದ, ಗುರಪ್ಪಗೌಡ ಸಿಕ್ಕಿಬಿದ್ದಿರಲಿಲ್ಲ. ಹೇಗಾದರೂ ಮಾಡಿ ಶಂಕರಪ್ಪಗೌಡರ ಕೈಯಿಂದ ಜಮೀನನ್ನು ತಪ್ಪಿಸಬೇಕೆಂಬ ಸಂಕಲ್ಪ ಸುಬ್ಬಯ್ಯಗೌಡನಿಗೆ. ಗುರಪ್ಪಗೌಡ ಅದನ್ನರಿಯ. ಸುಬ್ಬಯ್ಯಗೌಡ ಹೇಳಿದ, "ಎಲ್ಲಿಯೂ ಕೊಡದಿದ್ದರೆ ಇಲ್ಲಿ ಕೊಡಬೇಕು. ನನ್ನ ಹೆಂಗಸಿನ ಚಿನ್ನ, ಬೆಳ್ಳಿ ಒಡವೆಗಳನ್ನು ನಾನು ಕೊಡಿಸುವುದಿಲ್ಲವೇ? ಮನೆಗೆ ಬೆಂಕಿ ಬಿದ್ದಾಗ ನನ್ನದು, ನಿನ್ನದು ಎಂದು ಎಲ್ಲಿಯೂ ಯೋಚಿಸುತ್ತಾ ಕುಳಿತುಕೊಳ್ಳುವುದಿಲ್ಲ. ಇಲ್ಲದಿದ್ದರೆ ಎಲ್ಲರದೂ ಸುಟ್ಟು ಭಸ್ಮವಾಗುತ್ತದೆ."

ಸುಬ್ಬಯ್ಯಗೌಡನ ತರ್ಕ ಗುರಪ್ಪಗೌಡನ ಬಾಯಿಮುಚ್ಚಿಸಿತು. ಅಣ್ಣನ ಹೆಂಡತಿ ಕೊಡುವಾಗ ತನ್ನ ಹೆಂಡತಿ ಇನ್ನೇನು ಮಾಡಿಯಾಳು? ಎಲ್ಲರಿಗೂ ಆದದ್ದು ಅವಳಿಗೂ ಆಗುತ್ತದೆಂದುಕೊಂಡು ಗುರಪ್ಪಗೌಡ ಹೇಳಿದ, "ಶಂಕರಪ್ಪಗೌಡರಿಗೆ ನಂಬಿಕೆ ಕ್ರಯ ಮಾಡಿಕೊಟ್ಟದ್ದು ಸಾಲ ಕ್ಕೋಸ್ಕರವಲ್ಲ. ಯಾರ ಹೆಸರಿಗೆ ಕ್ರಯಪತ್ರವಾಗಬೇಕೆಂಬುದು ಇತ್ಯರ್ಥವಾಗದಿದ್ದರಿಂದ ಈಗಲೂ ಅದೇ ಮಾತು ಬರುತ್ತದೆ."

"ಅದೇ ಮಾತು ಏಕೆ ಬರುತ್ತದೆ? ಬೇರೆ ಎಲ್ಲರ ಮನೆಯನ್ನು ನೋಡು ಜಮೀನಿನ ಖಾತೆಯೆಲ್ಲ ಮನೆಯ ಯಜಮಾನರ ಹೆಸರಿನಲ್ಲಿರುತ್ತದೆ!" ತಿರುಗಿ ಸುಬ್ಬಯ್ಯಗೌಡ ಅದೇ ರಾಗವನ್ನು ಎತ್ತಿದ.

ನಾಲ್ಕಾರು ಸಾರಿ ಜನರೊಂದಿಗೆ ಓಡಾಡಿದ ಗುರಪ್ಪಗೌಡನಿಗೆ ಕಾನೂನಿನ ಕೆಲವು ಶಬ್ದಗಳ ಪರಿಚಯ ಚೆನ್ನಾಗಿ ಗೊತ್ತಿತ್ತು. ಆದ್ದರಿಂದ ಹೇಳಿದ, ಖಾತೆ ಇರುತ್ತದೆ. ಮನೆಯಲ್ಲಿದ್ದ ಹಿರಿಯರು ತೀರಿದಾಗ ಅವರ ತರುವಾಯ ಯಜಮಾನರಾಗುವವರ ಹೆಸರಿಗೆ ಖಾತೆ ಬದಲಾವಣೆಯಾಗುತ್ತದೆ. ನಮ್ಮ ಹತ್ತಿರ ಪಿತ್ರಾರ್ಜಿತವಾಗಿ ಬಂದ ಆಸ್ತಿ ಇಲ್ಲ. ಈಗ ನಿನ್ನ ಹೆಸರಿಗೆ ಕ್ರಯಪತ್ರವಾದರೆ ನಿನ್ನ ಸ್ವಯಾರ್ಜಿತವಾಗುತ್ತದೆ; ನನ್ನ ಹೆಸ

ರಿಗೆ ಕ್ರಯಪತ್ರವಾದರೆ ನನ್ನ ಸ್ವಯಾರ್ಜಿತವಾಗುತ್ತದೆ. ಆದ್ದರಿಂದಲೇ ನಾನು ಮೊದಲಿನಿಂದಲೂ ಇಬ್ಬರ ಹೆಸರಿಗೂ ಅರ್ಧ ಅರ್ಧ ಕ್ರಯಪತ್ರ ವಾಗಲೆಂದು ಹೇಳುತ್ತಿರುವುದು.

ತಮ್ಮನ ತರ್ಕಬುದ್ಧಿ ನೋಡಿ ಅಣ್ಣನಿಗೆ ವಿಸ್ಮಯವಾಯಿತು. ಮನಸ್ಸಿನಲ್ಲಿ ಅಂದುಕೊಂಡ–ಕಾಲಗತಿ ಬದಲಾವಣೆಯಾಗುತ್ತಿದೆ; ತಮ್ಮನೇ ಅಣ್ಣನಾಗುವ ಕಾಲ ಬಂದ ಹಾಗೆ ಕಾಣುತ್ತದೆ. ಸುಮ್ಮನೆ ಇದ್ದರೆ ಉಳಿಗಾಲವಿಲ್ಲವೆಂದುಕೊಂಡು ಹೇಳಿದ, “ಯಾರೋ ಹೇಳಿಕೊಟ್ಟ ಬುದ್ಧಿ ವಂತಿಕೆಯ ಮಾತನ್ನೇ ಆಡುತ್ತಿರುವೆ”

ಗುರಪ್ಪಗೌಡನಿಗೆ ಬೇಸರವಾಯಿತು. ಅದೇ ಮಾತನ್ನು ತಿರುಗಿಸಿದ, “ನನಗೆ ಹೇಳುತ್ತೀ ಹೇಳಿಕೊಟ್ಟ ಬುದ್ಧಿವಂತಿಕೆಯೆಂದು. ನೀನು ಮಾಡು ತ್ತಿರುವುದು ಅದೇ ಕೆಲಸ. ಹಿಂದೆ ನಿನ್ನ ಹೆಸರಿಗೆ ಕ್ರಯಪತ್ರವಾದಾಗ ಮಾಡಿದ್ದೇನು?”

“ಮೊದಲು ಬಸಪ್ಪಗೌಡರಿಗೆ ಬರೆದು ಕೊಟ್ಟವರು ಯಾರು?”

“ನನ್ನ ರಕ್ಷಣೆಗೆ ನಾನು ಮಾಡಿದೆ; ಎಲ್ಲ ಅಧಿಕಾರ, ಯಜಮಾನಿಕೆ ಇದ್ದು ನೀನು ಮಾಡಿದ ಕಾರ್ಯವೇನು?”

“ಒಬ್ಬರಿಗೂ ಇಲ್ಲದಂತೆ ಬಸಪ್ಪಗೌಡರಿಗಾಗಿ ಹೋಗುವದೆಂದು ನನಗೆ ಹಾಗೆ ಮಾಡಬೇಕಾಯಿತು. ಅದನ್ನು ನನ್ನಿಚ್ಛೆಯಿಂದ ಮಾಡಿರಲಿಲ್ಲ. ಸಾಲ ಕೊಟ್ಟಿದ್ದ ಅಪ್ಪಯ್ಯಗೌಡರ ಬಲವಂತಕ್ಕೆ.”

“ಬಸಪ್ಪಗೌಡರಿಗೆ ನಾನು ತಮಾಷೆಗೆ ಮಾಡಿಕೊಡಲಿಲ್ಲ. ಸಾಲ ತರಲು ಹೇಳಿದೆ, ತಂದೆ, ತರುವಾಯ ನೀನು ಸುಮ್ಮನಿದ್ದುಬಿಟ್ಟೆ. ನಾನೇನು ಮಾಡಬೇಕು?”

ಸುಬ್ಬಯ್ಯಗೌಡನಿಗೆ ಯಾವಕಡೆ ತಲೆ ಹಾಕಿದರು ಮುಳ್ಳುಬೇಲಿ. ಇದರ ಮಧ್ಯೆ ಉಪಾಯದಿಂದ ಶಂಕರಪ್ಪಗೌಡರ ಹೆಸರಿನಿಂದ ಕ್ರಯಪತ್ರ ವನ್ನು ಬದಲಾಯಿಸಬೇಕು. ಆದ್ದರಿಂದ ಮಾತನ್ನು ಬದಲಾಯಿಸಿ ಹೇಳಿದ, “ಕ್ರಯಪತ್ರ ಈಗ ಯಾರ ಹೆಸರಿಗೆ ಮಾಡಿಕೊಳ್ಳುವುದು?”

“ಇಬ್ಬರ ಹೆಸರಿಗೂ ಆಗಲಿ”

"ತಿರುಗಿ ಅದೇ ಮಾತು. ಇಬ್ಬರ ಹೆಸರಿಗೆ ಕ್ರಯಪತ್ರವಾದ ಮಾರನೆಯ ದಿನ ಇಬ್ಬರಿಗೂ ಹಿಸ್ಸೆಯಾದರೆ ಸರಿಯಲ್ಲ."

ಹಿಸ್ಸೆಯ ಮಾತು ಕೇಳುತ್ತಲೇ ಗುರಪ್ಪಗೌಡನ ಎದೆ ಅಳುಕಿತು. ಇದುವರೆಗೂ ಸುಬ್ಬಯ್ಯಗೌಡ ಹೇಗೆ ಕೆಲಸ ಮಾಡಿಸುವುದನ್ನು ಕಲಿತಿದ್ದನೋ ಅದೇ ರೀತಿ ಗುರಪ್ಪಗೌಡ ಕೆಲಸ ಮಾಡುವುದನ್ನು ಕಲಿತಿದ್ದ. ಸ್ವತಂತ್ರವಾಗಿ ಯೋಚಿಸಿ ಕೆಲಸ ಮಾಡಲು ಅವನಿಗೆ ಬಾರದು. ಅಣ್ಣನಿಲ್ಲದೆ ಹೋದರೆ ತನ್ನಿಂದ ಸಂಸಾರ ನಿರ್ವಹಿಸಿಕೊಂಡು ಹೋಗುವ ಶಕ್ತಿ ಇಲ್ಲವೆಂಬ ಭಾವನೆ ಬಲವಾಗಿ ಬೇರೂರಿತ್ತು. ಹಾಗೆಯೇ ಜಮೀನಿನ ಕ್ರಯಪತ್ರ ಹೆಸರಿಗಾಗಬೇಕೆಂಬ ತೀವ್ರ ಚಪಲತೆ ಸುಬ್ಬಯ್ಯಗೌಡನಿಗಿದ್ದರೂ ತನ್ನ ಮಕ್ಕಳು ಪ್ರವರ್ಧಮಾನಕ್ಕೆ ಬರುವವರೆಗೂ ಗುರಪ್ಪಗೌಡನನ್ನು ಬಿಟ್ಟಿರಲು ಧೈರ್ಯಬಾರದು.

ಗುರಪ್ಪಗೌಡ ಸುಮ್ಮನಾದ.

"ಇಂದು ಗೌರಿಹಬ್ಬ; ಮನಸ್ಸಿನಲ್ಲೊಂದು ಯೋಚನೆ ಬಂದಿದೆ. ಒಳ್ಳೆಯದೋ ಕೆಟ್ಟದೋ ಆ ದೇವರಿಗೆ ಗೊತ್ತು; ಹೇಗೂ ಅವನ ಕಾರ್ಯ. ಮನಸ್ಸಿಗೆ ಬಂದ ಮಾತನ್ನು ಮನಸ್ಸಿನಲ್ಲಿಯೇ ಏಕೆ ಇಟ್ಟುಕೊಳ್ಳಲಿ? ನಮ್ಮ ನಮ್ಮಲ್ಲಿ ತಿಕ್ಕಾಟವೇತಕ್ಕೆ ಅಣ್ಣೇಗುಡ್ಡೇದೇವರ ಹೆಸರಿಗೆ ಕ್ರಯಪತ್ರವಾಗಲಿ. ಆಗ ಯಾರಿಗೂ ಮೋಸವಾಗುವ ಭಯವಿರುವುದಿಲ್ಲ. ದೇವರು ಬಂದು ಯಾರಿಗೂ ಬರೆದುಕೊಡುವ ಹಾಗಿಲ್ಲ. ಹೇಗೂ ಅದು ನಮ್ಮ ಕುಲದೇವರು. ಆ ದೇವರಿಗೆ ಒಕ್ಕಲಾಗಿಯೇ ಇರೋಣ. ಈ ಶಂಕರಪ್ಪಗೌಡರು ಅಪ್ಪಯ್ಯಗೌಡರು, ಬಸಪ್ಪಗೌಡರ ಹೆಸರಿಗೆಲ್ಲ ಕ್ರಯಪತ್ರ ಮಾಡಿಕೊಟ್ಟು ಅವರ ಕೈಯ್ಯಲ್ಲಿ ಗೇಣಿಗುತ್ತಿಗೆ ಮಾಡುವುದಕ್ಕಿಂತ ಅವರ ಮನೆಯಲ್ಲಿ ಕೂಲಿಮಾಡುವುದು ಉತ್ತಮ. ಇದಾದರೂ ದೇವರ ಕಾರ್ಯ; ಪುಣ್ಯವಾದರೂ ಲಭಿಸಲಿ" ಎಂದು ಸುಬ್ಬಯ್ಯಗೌಡ ಹೊಸವಿಚಾರವೊಂದನ್ನು ತಂದ.

ಹೊಸ ವಿಷಯಗಳನ್ನು ಸ್ವತಂತ್ರವಾಗಿ ಯೋಚಿಸುವ ಶಕ್ತಿಯಿಲ್ಲದ ಗುರಪ್ಪಗೌಡ ಅಣ್ಣನ ಮುಖ ನೋಡುತ್ತಾ ನಿಂತ.

ತಮ್ಮ ಸುಮ್ಮನಿರುವುದನ್ನು ನೋಡಿ ಸುಬ್ಬಯ್ಯಗೌಡ ಮಾತು ಮುಂದುವರಿಸಿದ, "ಇದು ದೇವರ ಕಾರ್ಯ; ಇದಕ್ಕೆ ವಿಘ್ನ ಬರಬಾರದು. ಉಭಯತ್ರರಿಗೂ ಶುಭವುಂಟಾಗಬೇಕು."

ಅಣ್ಣನ ಹೆಸರಿಗೆ ಕ್ರಯಪತ್ರವಾಗುವುದಿಲ್ಲ, ಇದು ಇಬ್ಬರಿಗೂ ಒಂದೇ. ತನಗೆ ಅನ್ಯಾಯವಾಗುವ ಕೆಲಸ ಅವನು ಎಂದೂ ಮಾಡ. ಜೊತೆಯಲ್ಲಿ ದೇವರಸೇವೆ, ಅದರಲ್ಲಿ ವಿಘ್ನವನ್ನೇಕೆ ತರಲೆಂದು ಯೋಚಿಸಿ ಗುರಪ್ಪಗೌಡ ಹೇಳಿದ, "ನಿನಗೆ ಒಪ್ಪಿಗೆಯಾದರೆ ನನಗೂ ಒಪ್ಪಿಗೆ"

ಸುಬ್ಬಯ್ಯಗೌಡನಿಗೆ ಸಮಾಧಾನವಾಯಿತು.

ಅಣ್ಣ ತಮ್ಮಂದಿರಿಬ್ಬರೂ ಅಣ್ಣೇಗುಡ್ಡೇ ದೇವರ ಹೆಸರಿಗೆ ತಮ್ಮ ಜಮೀನನ್ನು ಕ್ರಯ ಬರೆದುಹಾಕುವ ನಿರ್ಧಾರದ ಮೂಲಕ ಗೌರಿಹಬ್ಬವನ್ನು ಆಚರಿಸಿದರು.

## ಎಂಟು

ಅಣ್ಣೇಗುಡ್ಡೆ ಪ್ರಸಿದ್ಧ ಯಾತ್ರಾಸ್ಥಳ; ಸ್ಥಳ ಮಹಾತ್ಮ್ಯೆ ವಿಚಿತ್ರವಾದ್ದು. ಬಹಳ ದೂರದಿಂದ ಹರಕೆ, ಪೂಜಾದಿಗಳಿಗೆ ಜನರು ಬರುವರು. ಪ್ರತಿ ಶನಿವಾರ ರಾತ್ರಿ 'ಅಮ್ಮ' ಭಕ್ತನೊಬ್ಬನ ಮೇಲೆ ಬರುತಾಳೆ; ಅಂದು ಜನರ ಬೊಡ್ಡ ಗುಂಪೊಂದು ನೆರೆಯುವುದು ನೇಮನಿಷ್ಠೆ; ಮಡಿ ಮೈಲಿಗೆಗಳಿಗಂತೂ ಅದಕ್ಕೆ ಸರಿಸಮಾನವಾದ ಸ್ಥಳ ಮತ್ತೊಂದಿಲ್ಲ. ನೇಮ, ನಿಷ್ಠೆ, ಮಡಿಯಲ್ಲಿರಬೇಕಾದವರು ಒದ್ದೆಬಟ್ಟೆಯಲ್ಲಿಯೇ ದಿನವೆಲ್ಲ ಅನ್ನ ನೀರಿಲ್ಲದಿರಬೇಕು. ಅಪ್ಪಿತಪ್ಪಿ ಎಂಜಲನ್ನು ನುಂಗುವಹಾಗಿಲ್ಲ; ತುಪ್ಪುವಹಾಗಿಲ್ಲ. ನುಂಗಿದರೂ ಮೈಲಿಗೆ; ತುಪ್ಪಿದರೂ ಮೈಲಿಗೆ. ಹರಕೆ ಸಲ್ಲಿಸಬೇಕಾಗಿರುವ ಭಕ್ತಾದಿಗಳು ಬಹಳ ನೇಮದಿಂದಿರುವುದಲ್ಲದೆ ಬಾಯಿಗೆ ಬಟ್ಟೆಕಟ್ಟಿಕೊಂಡಿರುತ್ತಾರೆ. ಇಲ್ಲದಿದ್ದರೆ ಹರಕೆ ಫಲಿಸುವುದಿಲ್ಲವೆಂದು ಜನರಲ್ಲಿ ನಂಬಿಕೆ.

ಅಣ್ಣೇಗುಡ್ಡೆ ದೇವರಿಗೆ ಹರಕೆಯನ್ನೊಪ್ಪಿಸುವುದರಿಂದ ಮಕ್ಕಳಿಲ್ಲದವರು, ತಾಯಂದಿರಾಗುತ್ತಾರಂತೆ; ದನ, ಕರು, ಪಾತ್ರೆಗಳನ್ನು ಕಳಕೊಂಡವರಿಗೆ ಅವು ದೊರೆಯುವುವಂತೆ; ಶನಿ ಹಿಡಿದವರಿಗೆ ಶನಿ ಬಿಟ್ಟು ಹೋಗುವುದಂತೆ. ತನ್ನ ಶತ್ರುವನ್ನು ಕೊಲ್ಲಬೇಕಾದವರು ಹರಕೆ ಸಲ್ಲಿಸಿ

ದರೆ ಸಾಕು, ಹರಕೆ ಸಲ್ಲಿಸಿದ ಎರಡು ಗಳಿಗೆಯೊಳಗೆ ಅವನು ರಕ್ತಕಾರಿ ಸತ್ತುಹೋಗುವವನಂತೆ. ಇಂಥ ಸತ್ಯಭಯಂಕರಕಾರಿಯಾದ ದೇವರ ಹೆಸರನ್ನು ಕೇಳಿದರೆ ಎಂಥವರ ಎದೆಯಾದರೂ ನಡುಗುತಿತ್ತು. ಅಲ್ಲಿಗೆ ಹೋಗಿ ಗೆದ್ದವನಿಲ್ಲ; ಹೋಗದೆ ಸೋತವನಿಲ್ಲ, ಬಂದ ದಾರಿಯಲ್ಲಿಯೇ ಹೋಗಲು ಪ್ರಯತ್ನಪಟ್ಟು ಬೇಟೆಗಾರನಿಗೆ ಬಲಿಯಾಗುವ ಪ್ರಾಣಿಯಂತೆ ಅಂಥ ವಿಶ್ವಾಸದ ದಾರಿಯಲ್ಲಿ ನಡೆಯುವ ಜನ, ಆ ದೇವರಿಗೆ ಬಲಿಯಾಗುತ್ತಿದ್ದರು.

ಅಣ್ಣೇಗುಡ್ಡೆಯ ಗುಡಿಯ ಕೈಸಾಲೆಯಲ್ಲಿ ನಿಂತುಕೊಂಡರೆ ಅಣ್ಣೇಮಕ್ಕಿಯವರ ಗದ್ದೆ, ತೋಟ, ತೋಟದ ಸಂದಿಯಲ್ಲಿ ಅವರ ಮನೆ ಕಾಣಿಸುವುದು.

ದೇವರ ಹೆಸರಿಗೆ ಕ್ರಯಪತ್ರವಾಗಬೇಕೆಂದು ನಿರ್ಧಾರವಾದ ಮೇಲೆ ತೊಡಕುಗಳು ಬರಲು ಆರಂಭವಾದವು. ಶುಭಕಾರ್ಯಗಳಲ್ಲಿ ತೊಡಕು ಬರುವುದು ಸ್ವಾಭಾವಿಕ. ಶಂಕರಪ್ಪಗೌಡರಿಂದ ಅಣ್ಣೇಗುಡ್ಡೆ ದೇವರ ಹೆಸರಿಗೆ ಕ್ರಯಪತ್ರವಾದರೆ ಪುಣ್ಯವೆಲ್ಲ ಶಂಕರಪ್ಪಗೌಡರ ವಂಶದವರಿಗೆ ಸೇರುವುದೆಂಬ ತೊಡಕೊಂದು; ಅಣ್ಣೇಮಕ್ಕಿಯವರು ತಮ್ಮ ಕುಲದೇವರಿಗೆ ಕ್ರಯಪತ್ರ ಮಾಡಿಕೊಟ್ಟದಕ್ಕೆ ದಾಖಲೆಯಿರುವುದಿಲ್ಲವೆಂಬುದು ಎರಡನೆಯ ತೊಡಕು; ಮೂರನೆಯ ತೊಡಕು ದೇವರ ಹೆಸರಿಗೆ ಕ್ರಯಪತ್ರವಾದಮೇಲೆ ಬರುವ ಉತ್ಪತಿಯಲ್ಲಿ ಕೊಡುವ ಗುತ್ತಿಗೆಯ ಅಂಶ; ನಾಲ್ಕನೆಯ ತೊಡಕು ದೇವರ ಹೆಸರಿಗೆ ಕ್ರಯಪತ್ರ ಶ್ರೇಷ್ಠವೋ ದಾನಪತ್ರ ಶ್ರೇಷ್ಠವೋ ಎಂಬುದು.

ಎಲ್ಲ ತೊಡಕುಗಳಿಗಿಂತಲೂ ಸವಿಸ್ತಾರವಾಗಿ ಚರ್ಚೆನಡೆದಿದ್ದ ಕ್ರಯಪತ್ರ, ದಾನಪತ್ರಗಳ ಮೇಲೆ ದಾನಪತ್ರವಾದರೆ ಕ್ರಯಪತ್ರಕ್ಕೆ ತಗಲುವ ವೆಚ್ಚ ಉಳಿಯುವುದಲ್ಲದೆ ಹೆಚ್ಚು ಪುಣ್ಯಕ್ಕೆ ಭಾಗಿಗಳಾಗಬಹುದೆಂದು ತಮ್ಮನ ವಾದ. ಜಮೀನನ್ನೆಲ್ಲಾ ದೇವರ ಹೆಸರಿಗೆ ಕ್ರಯಪತ್ರ ಬರೆಯುವಾಗ ಕ್ರಯಪತ್ರಕ್ಕೆ ತಗಲುವ ಐವತ್ತು ರೂಪಾಯಿ ಖರ್ಚಿನ ಮುಖ ನೋಡುವುದಕ್ಕಾಗುತ್ತದೆಯೇ! ಇನ್ನು ಪುಣ್ಯದ ವಿಚಾರದಲ್ಲಿ ಎರಡೂ ಧರ್ಮಕಾರ್ಯ, ಹೆಚ್ಚುಕಡಮೆಯ ಮಾತಿಲ್ಲವೆಂದು ಅಣ್ಣನ ತರ್ಕ.

ಅಣ್ಣನ ತರ್ಕವನ್ನು ಕೇಳಿ ಗುರಪ್ಪಗೌಡ ಹೇಳಿದ, "ಎರಡೂ ಧರ್ಮಕಾರ್ಯ ನಿಜ, ಎರಡರ ಫಲವೂ ಒಂದೇ ಅಲ್ಲ. ದಾನ, ದಕ್ಷಿಣೆ ಎರಡೂ ಧರ್ಮದ ಕಾರ್ಯವಾದರೂ ದಾನದಲ್ಲಿ ದಾನಮಾಡುವವನಿಗೆ ಪುಣ್ಯಬರುತ್ತದೆ, ದಾನ ಹಿಡಿಯುವವನಿಗಿಲ್ಲ; ದಕ್ಷಿಣೆಯಲ್ಲಿ ಹಾಗಲ್ಲ, ದಕ್ಷಿಣೆ ಕೊಡುವವನಿಗೂ ಪುಣ್ಯ, ದಕ್ಷಿಣೆ ತೆಗೆದುಕೊಳ್ಳುವವನಿಗೂ ಪುಣ್ಯ."

ತಮ್ಮನ ತರ್ಕ ಅಣ್ಣನ ಬಾಯಿಯನ್ನು ಮುಚ್ಚಿಸಿತು. ಇದು ಸಹೋದರರಿಬ್ಬರ ಬಹಿರಂಗ ತರ್ಕ. ಇದರ ಮೂಲಕ ಯಾವುದೊಂದು ನಿರ್ಣಯವನ್ನು ಮುಟ್ಟಬೇಕಾಗಿರಲಿಲ್ಲ. ಇಬ್ಬರ ಅಂತರಂಗದ ಉದ್ದೇಶ ಭಿನ್ನವಾದ್ದು. ಆ ಗುರಿಯನ್ನು ಮುಟ್ಟುವ ಉದ್ದೇಶದಲ್ಲಿ ಇಬ್ಬರೂ ಇದ್ದರು. ವಸ್ತುವನ್ನು ದಾನಮಾಡಿದ ಮೇಲೆ ಆದರ ಮೇಲಿನ ಅಧಿಕಾರ ತಪ್ಪಿಹೋಗುವುದರಿಂದಲೂ ಅಣ್ಣನಿಗೆ ತಿರುಗಿ ಯಾವ ವಿಧದಿಂದಲೂ ಸಿಗುವುದಿಲ್ಲವಾದ್ದರಿಂದ ದಾನಪತ್ರವಾಗಲೆಂದು ಗುರಪ್ಪಗೌಡನ ಯೋಚನೆ. ದಾನಪತ್ರವಾದ ಪದಾರ್ಥ ತಿರುಗಿ ಹಿಂದಕ್ಕೆ ಬರುವುದಿಲ್ಲ, ಕ್ರಯಪತ್ರವಾದರೆ ಯಾವುದಾದರೊಂದು ಕಾರಣದಿಂದ ತಿರುಗಿ ನಮ್ಮ ಕೈಗೆ ಬಂದರೂ ಬರಬಹುದೆಂದು ಸುಬ್ಬಯ್ಯಗೌಡನ ಹಂಚಿಕೆ.

ಹೀಗೆ ಅಣ್ಣತಮ್ಮಂದಿರಿಬ್ಬರೂ ಮನಸ್ಸಿನಲ್ಲೊಂದು, ಬಾಯಿನಲ್ಲೊಂದು ತೀರ್ಮಾನದಲ್ಲಿದ್ದರು. ದೇವರಿಗೆ ಕ್ರಯಪತ್ರವಾಗುವ ಮೊದಲು ಶಂಕರಪ್ಪಗೌಡರಿಂದ ತಮ್ಮಿಬ್ಬರ ಹೆಸರಿಗೂ ಕ್ರಯಪತ್ರವಾಗಲೆಂದು ಸುಬ್ಬಯ್ಯಗೌಡ ಹೇಳಿದ್ದನ್ನು ಗುರಪ್ಪಗೌಡನೊಪ್ಪಿದ. ತಮ್ಮ ವಂಶದವರ ಆಸ್ತಿಯು ಕ್ರಯಪತ್ರ ತನ್ನ ಹೆಸರಿಗೂ ಆಗಬೇಕೆಂಬ ಬಹಳ ದಿನದ ಗುರಪ್ಪಗೌಡನ ಬಯಕೆ, ದೇವರ ಹೆಸರಿಗೆ ಕ್ರಯಪತ್ರವಾಗಿ, ತಮ್ಮ ಕೈಯಿಂದ ತಪ್ಪುವ ಮೊದಲು ಗುರಪ್ಪಗೌಡ, ಸುಬ್ಬಯ್ಯಗೌಡರಿಬ್ಬರ ಹೆಸರಿಗೂ ಆಯಿತು. ಬಹಳ ಕಷ್ಟಕರವಾದ ಈ ತೊಡಕು ಸುಲಭವಾಗಿ ವಿತ್ಯರ್ಥವಾದ್ದರಿಂದ ಇತರ ಎಲ್ಲಾ ವಿಚಾರಗಳು. ಸರಾಗವಾಗಿ ಕೈಗೂಡಿದವು. ವರ್ಷಕ್ಕೆ ಎಂಟು ಖಂಡುಗ ಭತ್ತ ಗುತ್ತಿಗೆಯ ರೂಪದಲ್ಲಿ ಕೊಡಬೇಕೆಂದು ಮಾತಾಯಿತು.

ಪುಣ್ಯ ಮತ್ತು ದಾಖಲೆಯ ಬಗ್ಗೆ ಸುಬ್ಬಯ್ಯಗೌಡ ಮತ್ತು ಗುರಪ್ಪ ಗೌಡ ತಮ್ಮ ಹೆಸರಿನ ಜಮೀನನ್ನು ಶುಭಮುಹೂರ್ತದಲ್ಲೊಂದು ದಿನ ತಮ್ಮ ಪರಿವಾರದವರೊಂದಿಗೆ ನದಿಯಲ್ಲಿ ಸ್ನಾನಮಾಡಿ ಹನ್ನೆರಡುವರೆ ರೂಪಾಯಿಯ ಛಾಪಾ ಕಾಗದದ ಮೇಲೆ ಅಣ್ಣೇಗುಡ್ಡೆ ದೇವರ ಹೆಸರಿಗೆ ಶುದ್ಧಕ್ರಯಕ್ಕೆ ಬರೆದು ಹಾಕಿದರು.

ದೇವರ ಹೆಸರಿಗೆ ಕ್ರಯಪತ್ರಮಾಡಿ ಬಂದಾಗ ಇಬ್ಬರೂ ಹರ್ಷಚಿತ್ತ ರಾಗಿದ್ದರು. ಅಸೂಯೆಗೆ ಕಾರಣವಾದ ಜಮೀನು ಇಬ್ಬರ ಕೈಯಿಂದಲೂ ತಪ್ಪಿದ್ದರಿಂದ ಗೆಲುವಿನಲ್ಲಿದ್ದರು.

ಮದ್ಯ ಮಳೆಗಾಲ, ಕೈಯ್ಯಲ್ಲಿ ದುಡ್ಡಿಲ್ಲ. ನಾಟಿಯ ಸಮಯ.ದಲ್ಲಿ ಸುಬ್ಬಯ್ಯಗೌಡನ ಹೆಂಡತಿ ಕಾಯಿಲೆಬಿದ್ದಳು. ಕೂಲಿಕೊಟ್ಟು ಗದ್ದೆ ನಡಿಸಬೇಕಾಯಿತು ಕೈಯ್ಯಲಿದ್ದ ಆರು ಮೂರು ಕಾಸೆಲ್ಲ ದೇವರ ಹೆಸರಿನಲ್ಲಿ ಕ್ರಯಪತ್ರ ಮಾಡುವುದರಲ್ಲಿ ಖರ್ಚಾಗಿಹೋಗಿತ್ತು. ಅಕ್ಕಪಕ್ಕ ಹಳ್ಳಿಯಲ್ಲಿರುವ ಸಾಹುಕಾರರ ಹತ್ತಿರ ಕೈಗಡ ಕೇಳಿದರು. ಎಲ್ಲಿಯೂ ಒಂದುಕಾಸು ಸಾಲ ಹುಟ್ಟಲಿಲ್ಲ. ತಮ್ಮ ಜೀವನದಲ್ಲಿ ಮೊದಲನೆಯ ಸಾರಿ ಅಣ್ಣಿಮಕ್ಕಿಯವರು ಈ ಕಷ್ಟವನ್ನು ಅನುಭವಿಸಿದರು. ಹಿಂದೆಯೂ ಕೈಯ್ಯಲ್ಲಿ ದುಡ್ಡನಿಟ್ಟುಕೊಂಡು ಅವರು ಸಂಸಾರ ನಡೆಸುತಿರಲಿಲ್ಲ. ಸಾಲ ಇರುತ್ತಿತ್ತು, ಒಬ್ಬರಿಗಲ್ಲ ಒಬ್ಬರ ಹೆಸರಿನಲ್ಲಿ ಅವರ ಜಮೀನು ನಂಬಿಕೆ ಕ್ರಯವಾಗಿರುತ್ತಿತ್ತು, ಆದರೂ ಸಮಯವೊದರೆ ಸಾಲ ಸಿಗುತ್ತಿತ್ತು. ಈಗ ಯಾರಲ್ಲಿಯೂ ಸಾಲವಿಲ್ಲದಿದ್ದುದರಿಂದ ಯಾರೂ ಸಾಲ ಕೊಡುತಿಲ್ಲ.

ಅವರ ಜಮೀನು ಒಬ್ಬರಲ್ಲೊಬ್ಬರ ಹೆರರಿಗೆ ನಂಬಿಕೆ ಕ್ರಯಪತ್ರ ವಾಗಿರುತ್ತಿದ್ದರೂ ಸ್ವಂತ ಹಿಡುವಳಿದಾರರೆಂಬ ಭಾವನ ಹಳ್ಳಿಯವರಿಗಿತ್ತು. ಅವರೂ ತಾವು ಸ್ವಂತ ಹಿಡುವಳಿದಾರರೆಂಬ ಭಾವನೆಯಲ್ಲಿಯೇ ಇರುತ್ತಿದ್ದರು. ಈಗ ಅವರು ಸ್ವಂತ ಹಿಡುವಳಿದಾರರಲ್ಲ, ಗೇಣಿ ಗುತ್ತಿಗೆ ಮಾಡುವವರು. ಸ್ವಂತ ಹಿಡುವಳಿದಾರರ ಸ್ಥಾನ ಮಾನಗಳು ತಪ್ಪಿಹೋಗಿತ್ತು. ಕೆಲವರು ಸಾವಿರಾರು ಎಕರೆಯ ಹಿಡುವಳಿದಾರರಾಗಿರಬಹುದು, ಕೆಲವರು ನಾಲ್ಕು, ಐದು ಎಕರೆ ಹಿಡುವಳಿದಾರರಾಗಿರಬಹುದು. ಆದರೆ ಎಲ್ಲರ ಸ್ಥಾನ ಮಾನ ಒಂದೇ. ಗುತ್ತಿಗೆದಾರರು ಬೇರೆಯವರ ಒಕ್ಕಲಾಗಿರುವುದರಿಂದ

ಸಾಹುಕಾರರು ಅವರಿಗೆ ಸಾಲ ಕೊಡುವುದಿಲ್ಲ. ಗೇಣಿಗುತ್ತಿಗೆದಾರರಿಗೆ ಸಾಲ ಅಥವಾ ಸಾಮಾನು ಬೇಕಾದರೆ ಚಿಕ್ಕ ಪುಟ್ಟ ಅಂಗಡಿಗಳಿಂದ ಕೈಗಡ ತರಬೇಕು. ಅಣ್ಣೇಮಕ್ಕಿಯವರು ಅಣ್ಣೇಗುಡ್ಡೇದೇವರ ಒಕ್ಕಲು. ಒಕ್ಕಲು ಒಕ್ಕಲ ಸುಖ ದುಃಖಗಳನ್ನು ವಿಚಾರಿಸುವುದು ಒಡೆಯನ ಕರ್ತವ್ಯ. ಅಣ್ಣೇಮಕ್ಕಿಯವರ ಒಡೆಯ ಅಣ್ಣೇಗುಡ್ಡೆ ದೇವರು. ದೇವರು ನರಮನುಷ್ಯರ ಹತ್ತಿರ ಮಾತನಾಡುವುದಿಲ್ಲ. ದೇವರ ದರ್ಬಾರಿಗೆ ಯಾವ ವಿಚಾರ ಹೋಗಬೇಕಾದರೂ ಏನೇ ಅಲ್ಲಿಂದ ಅಪ್ಪಣೆಯಾಗ ಬೇಕಾದರೂ ಅವನ ಪ್ರತಿನಿಧಿಗಳಾದ ಪೂಜಾರಿ ಅಥವಾ ಪಾರುಪತ್ತೇಗಾರರಿಂದಾಗಬೇಕು. ದೇವರ ದರ್ಬಾರಿನಲ್ಲಿ ಲೇವಾದೇವಿಗೆ ಅವಕಾಶವಿಲ್ಲ, ಏನಿದ್ದರು ದಾನ ದಕ್ಷಿಣೆ. ಅಣ್ಣೇಮಕ್ಕಿಯವರಿಗೇನಾದರು ವಿಪತ್ತು ಸಂಭವಿಸಿದರೆ ಅಣ್ಣೇಗುಡ್ಡೇ ದೇವರಿಗೆ ಹಣ್ಣು ಕಾಯಿ ಅರ್ಪಿಸಿ ಕಾಣಿಕೆಹಾಕಿ ಬರಬೇಕಾಗಿತ್ತು.

ಚಿಲ್ಲರೆ ಅಂಗಡಿಯೊಂದರಲ್ಲಿ ಆವ ವರ್ಷದ ಬೆಳೆಯ ಆಧಾರದ ಮೇಲೆ ಸ್ವಲ್ಪ ಕೈಗಡ ಸಿಕ್ಕಿತು. ಚಿಲ್ಲರೆ ಅಂಗಡಿಯವರ ಲೆಕ್ಕಾಚಾರವನ್ನು ನೋಡಿದರೆ ಸಾಹುಕಾರರೆ ಉತ್ತಮವೆಂದು ಕಾಣುತ್ತದೆ. ಚಿಲ್ಲರೆ ಅಂಗಡಿಯವರು ಸಾಲವನ್ನೆಲ್ಲ ಸಾಮಾನಿನ ಮೂಲಕವೇ ಕೊಡುತ್ತಾರೆ. ಅಲ್ಲಿ ಅವರು ಕೊಟ್ಟ ಪದಾರ್ಥ; ಅವರ ತೂಕ; ಅವರ ಬೆಲೆ ನಗದು ಹಣ ಸಾಲ ಕೊಡುವುದಿಲ್ಲ, ಎಲ್ಲಿಯಾದರೂ ಕೊಟ್ಟರೆ ರೂಪಾಯಿಗೆ ರೂಪಾಯಿ ಬಡ್ಡಿ ಸಾಲ ಸಿಗುವುದೂ ಒಂದು ತಿಂಗಳಿಗೆ ತಪ್ಪಿದರೆ ಎರಡು ತಿಂಗಳಿಗೆ ಮಾತ್ರ. ಈ ಜೀವನದಿಂದ ಬೇಜಾರು ಬಂದು ಸುಬ್ಬಯ್ಯಗೌಡ ಎಲ್ಲಾ ತಪ್ಪನ್ನು ತಮ್ಮನ ಮೇಲೆ ಹಾಕಿದ; ಗುರಪ್ಪಗೌಡ ಅಣ್ಣನ ಮೇಲೆ.

## ಒಂಭತ್ತು

"ಮನೆಯಲ್ಲಿ ಅಕ್ಕಿಕಾಳಿಲ್ಲ, ನಾವಾದರೂ ಹೊಟ್ಟೆಗೆ ಕಲ್ಲು ಕಟ್ಟಿಕೊಂಡಿರಬಹುದು, ಆ ಮಕ್ಕಳನ್ನೇನು ಮಾಡುವುದು?" ಸುಬ್ಬಯ್ಯಗೌಡನ ಹೆಂಡತಿ ಪುಟ್ಟಮ್ಮ ಗಂಡನನ್ನು ಕೇಳಿದಳು.

"ಯಾರ ಮನೆಗಾದರೂ ದನ ಮೇಯಿಸಲು ಹೋಗಲಿ ನಾನು ಸಾಧ್ಯವಾದಷ್ಟು ಮಾಡಿದೆ. ಇನ್ನು ನನ್ನ ವಶವೇನು ನಡೆಯುವುದಿಲ್ಲ" ಎಂದು ಸುಬ್ಬಯ್ಯಗೌಡ ರಾಗ ಎಳೆದ.

ಗಂಡನು ತನ್ನಿಂದ ಸಾಧ್ಯವಿಲ್ಲವೆಂದಮೇಲೆ ಹೆಣ್ಣು ಹೆಂಗಸಿನ ವಶವೇನಿದೆ? ಇವರು ದುಡಿದು ಹೆಂಗಸರನ್ನು ಸುಖವಾಗಿಡುವ ಮಾತಿನಲ್ಲಿ, ಮನೆಯ ಉದ್ಧಾರದ ಹೆಸರಿನಲ್ಲಿ ಕೈ, ಮೈಯಲ್ಲಿದ್ದ ಒಡವೆಗಳನ್ನೆಲ್ಲ ಕಳಕೊಂಡಿದಾಯಿತು ಅದರ ದುಃಖ ಮಕ್ಕಳಿಗೆ ಅನ್ನವಿಲ್ಲದ ದುಃಖಕ್ಕಿಂತ ಹೆಚ್ಚಾದುದು. ಎರಡು ಒಂದಾಗಿ ಪುಟ್ಟಮ್ಮನನ್ನು ರೇಗಿಸಿತು. ಕಣ್ಣಲ್ಲಿ ನೀರು ತಂದು ಹೇಳಿದಳು. "ಈ ಮನೆಗೆ ಬೆಂಕಿ ಬೀಳಲಿಕ್ಕೆ ಈ ಮನೆಯಲ್ಲಿ ಗೇದು ಗೇದು ಸೊಂಟ ಮುರಿದು ಹೋಯಿತು. ಬೇಗ ಮುರಿದು ಬಿದಿದ್ದರೆ ದೇಶಾಂತರ ಹೋಗಬಹುದಿತ್ತು. ಈಗ ಮಕ್ಕಳನ್ನೂ ಕಳಕೊಳ್ಳುವ ಗತಿ ಬಂದಿದೆ."

"ದೇವರು ಕೊಟ್ಟದ್ದನ್ನೆಲ್ಲಾ ಅನುಭವಿಸಲೇ ಬೇಕು."

"ದೇವರು ಕೊಡುತ್ತಾನೆ, ಇಲ್ಲಿ ಮನೆಯಲ್ಲಿ ತಿನ್ನಲಿಕ್ಕೆ ಯಾರೂ ಇಲ್ಲವೆಂದು ಹೋಗಿ ಬರೆದು ಕೊಟ್ಟುದ್ದೀರಿ, ದೇವರು ಕೊಡುತ್ತಾನೆ."

"ಅದಕ್ಕೆ ನಾನೇನು ಮಾಡಲಿ, ಗುರಪ್ಪ ಮಾಡಿದ್ದು. ಅವನನ್ನು ಕೇಳು."

ಕಟ್ಟಿಗೆ ತರಲು ಹೋಗಿದ್ದ ಗುರಪ್ಪಗೌಡನ ಹೆಂಡತಿ ನಾಗಮ್ಮ 'ಗುರಪ್ಪ' ಎನ್ನುವ ಹೊತ್ತಿಗೆ ಅಲ್ಲಿಗೆ ಸರಿಯಾಗಿ ಬಂದಳು. ಪುಟ್ಟಮ್ಮ ಹೇಳಿದಳು, "ಅಣ್ಣನ ಮೇಲೆ ತಮ್ಮ; ತಮ್ಮನ ಮೇಲೆ ಅಣ್ಣ; ನೀವೇ ತಕ್ಕೆ ಬೇರೆಯವರ ಮಾತನ್ನು ಕೇಳಬೇಕಿತ್ತು."

"ಬೇರೆಯವರ ಮಾತನ್ನು ಕೇಳಲಿಕ್ಕೆ ನಾನು ಹೋಗಲಿಲ್ಲ; ಅವನು ನನ್ನಹಾಗೆ ಪಾಲುಗಾರ."

ನಿರಪರಾಧಿಯಾದ ತನ್ನ ಗಂಡನ ಮೇಲೆ ಸುಬ್ಬಯ್ಯಗೌಡ, ಅವನ ಹೆಂಡತಿ ತಪ್ಪನ್ನು ಹೊರಿಸುವುದನ್ನು ನೋಡಿ ನಾಗಮ್ಮನಿಗೆ ತುಂಬಾ ಬಂತು, "ನಾನು, ನನ್ನ ಗಂಡ ಎಲ್ಲರ ಕಣ್ಣಿಗೂ ಬೀಳುತ್ತವೆ ನಾವು ಅನ್ನ

ಇಲ್ಲದೆ ಸತ್ತರೆಂದು ಹೇಳುತ್ತೀರಿ. ರಾತ್ರಿ ಹಗಲು ದುಡಿಯುವುದು ಸಾಲದಾಗಿದೆ" ಎಂದು ಹೇಳಿದಳು.

"ನೀನು ಹೆಂಗಸು, ನಿನ್ನ ಕೈಯಲ್ಲೇನು ಮಾತು" ಎಂದು ಸುಬ್ಬಯ್ಯಗೌಡ ಅಧಿಕಾರ ವಾಣಿಯಿಂದ ಹೇಳಿದ. ಹೇಳಿದವನು ಭಾವನಾಗಿದ್ದರಿಂದ ನಾದಿನಿ ಸುಮ್ಮನಿರಬೇಕಾಯಿತು, ಪುಟ್ಟಮ್ಮ ಹೇಳಿದ್ದರೆ ಸುಮ್ಮನಿರುತಿರಲಿಲ್ಲ. ಇಷ್ಟರಲ್ಲಿ ಪುಟ್ಟಮ್ಮ ಹೇಳಿದಳು, "ನನ್ನನ್ನು ದುಡಿದು ಯಾರೂ ಕೂರಿಸಿ, ಇದುವರೆಗೆ ಅನ್ನ ಹಾಕಲಿಲ್ಲ, ದುಡಿದು ನನ್ನ ಸೊಂಟವೆಲ್ಲ ಮುರಿದೆ ಹೋಗಿದೆ. ನೀನು ನಿನ್ನ ಗಂಡನಾದರೆ ಇನ್ನು ನಾಲ್ಕುಕಾಲ ದುಡಿಯಬಹುದು, ನನ್ನ ಗತಿ ಹೇಳು."

ತಾನು ತನ್ನ ಗಂಡ ಗಟ್ಟಿಮುಟ್ಟಾಗಿದ್ದುದರಿಂದಲೇ ಇವರು ಹೀಗೆ ದುಡಿಸುವುದೆಂದುಕೊಂಡು, ನಾಗಮ್ಮ ಹೇಳಿದಳು, "ಇದುವರೆಗೂ ಸೊಸೆಯಂತೆ ನನ್ನಕೈಲಿ ದುಡಿಸಿದರೂ ನಮ್ಮ ಕೈಕಾಲು ಗಟ್ಟಿ ಮುಟ್ಟಾಗಿವೆ ಎಷ್ಟೇ ಕೆಲಸ ಕೊಟ್ಟರೂ ಇವರು ಹಿಂಜರಿಯುವುದಿಲ್ಲವೆಂದು ಮನೆತನ ಉಳಿಸುವ ಹೆಸರಿನಲ್ಲಿ ಕಿವಿ, ಕತ್ತಿನಲ್ಲಿದ್ದುದನ್ನೆಲ್ಲ ತೆಗೆದುಕೊಂಡು ಗಂಟು ಕಟ್ಟಿಕೊಂಡಿರಿ. ಇನ್ನು ಮನೆಯಿಂದ ಹೊರಡಿಸುವ ಮಾರ್ಗ ಹುಡುಕುವುದಾಗಿದೆ."

ನಾಗಮ್ಮನ ಮಾತನ್ನು ಕೇಳಿ ಈಸಾರಿ ಸುಬ್ಬಯ್ಯಗೌಡನಿಗೆ ತುಂಬಾ ಕೋಪ ಬಂತು. ಇಷ್ಟು ಧೈರ್ಯದಿಂದ ಇದುವರೆಗೂ ಗುರಪ್ಪ ಸಹ ನನಗೆ ಎದುರುತ್ತರ ಕೊಡಲಿಲ್ಲ, ಇವಳು ಕೊಡುತ್ತಾಳಲ್ಲ ಎಂದುಕೊಂಡು ತನ್ನ ಹೆಂಡತಿಗೆ ಗದರಿಸಿ ಹೇಳಿದ, "ಸುಮ್ಮನಿರು, ಹೆಚ್ಚು ಮಾತನಾಡಬೇಡ."

ತನ್ನ ತಂಗಿಯ ಮುಂದೆ ತನಗೆ ಮುಖಭಂಗವಾದ್ದರಿಂದ ಪುಟ್ಟಮ್ಮನಿಗೆ ಕೋಪ ಸಹಿಸಲು ಸಾಧ್ಯವಾಗದೆ, ಹೇಳಿದಳು, "ನಿನ್ನ, ನಾನು ತರಲಿಲ್ಲಕಣೇ! ನೀನು ನನ್ನ ತಂದವಳು; ಅದಕ್ಕೆ ಇಷ್ಟು ಯಜಮಾನಿಕೆ ಮಾಡುತಿರುವೆ. ಗಂಡನ ಕುಣಿಸಿ ಕುಣಿಸಿ ಮನೆತನವನ್ನು ಈ ಅವಸ್ಥೆಗೆ ಹಾಕಿದೆ! ಒಂದು ಹೊತ್ತು ಅನ್ನವಿದ್ದರೆ ಇನ್ನೊಂದು ಹೊತ್ತು ಅದೂ ಇಲ್ಲ."

"ನೀವು ನಿಮ್ಮ ಗಂಡನನ್ನು ಕುಣಿಸುತಿದೀರಿ, ಹಾಗೆ ಎಲ್ಲರೆಂದು ನಿಮ್ಮ ಯೋಚನೆ. ಪುಣ್ಯಬರಲೆಂದು ಜಮೀನನ್ನೆಲ್ಲ ದೇವರ ಹೆಸರಿಗೆ ಬರೆದುಹಾಕಿದಾಯಿತು" ಎಂದಳು ನಾಗಮ್ಮ.

ಮಾತು ಕೇಳುವವರಿದ್ದರೆ ಎಲ್ಲರೂ ಯಜಮಾನಿಕೆ ನಡೆಸಲು ಬರುತ್ತಾರೆ, ತಿರುಗಿಬಿದ್ದರೆ ಹಿಂದಕ್ಕೆ ಸರಿಯುತ್ತಾರೆ. ಮಾತಿಗೆಮಾತು ಬೆಳೆಯುವುದನ್ನು ನೋಡಿ ಸುಬ್ಬಯ್ಯಗೌಡ ತನ್ನ ಹೆಂಡತಿಯನ್ನು ಹಿಂದಕ್ಕೆ ತಳ್ಳಿ, ಸುಮ್ಮನಿರುವಂತೆ ಗದರಿಸಿದ.

ಸುಬ್ಬಯ್ಯಗೌಡನ ಈ ಆಚರಣೆಯಿಂದ ನಾಗಮ್ಮನಿಗೆ ನಾಚಿಕೆಯುಂಟಾಯಿತು ಭಾವನ ಮುಂದೆ ತಾನು ಅವಿವೇಕತೆಯಿಂದ ವರ್ತಿಸಿದನಲ್ಲ ಎಂದುಕೊಂಡು ಅಲ್ಲಿಂದ ಹೊರಟುಹೋದಳು.

ಮನೆಯ ಉದ್ಧಾರದ ಹೆಸರಿನಲ್ಲುಂಟಾದ ಅನರ್ಥ ಎಲ್ಲರಿಗೂ ದುಃಖವನ್ನುಂಟುಮಾಡಿತು. ಅದನ್ನು ಸಹಿಸಲು ಸಾಧ್ಯವಿರಲಿಲ್ಲ. ಆದ್ದರಿಂದ ಸಮಯ ದೊರೆತಾಗಲೆಲ್ಲ ಪುಟ್ಟಮ್ಮ ತನ್ನ ಗಂಡನನ್ನೂ ನಾಗಮ್ಮ ತನ್ನ ಗಂಡನನ್ನೂ ಬೈಯುತಿದ್ದರು. ಇದು ಕ್ರಮೇಣ ಅಕ್ಕತಂಗಿಯರ ಕಲಹದ ರೂಪವನ್ನು ತಾಳಿತು. ಒಳಗೆ ಬಡತನ, ಹೊರಗೆ ಕಲಹ. ಹೆಂಗಸರಿಬ್ಬರೂ ಮನೆಯ ಕೆಲಸಕಾರ್ಯವನ್ನು ಕಡಮೆಮಾಡುತ್ತಾ ಬಂದರು. ಯಜಮಾನಿಕೆಯ ಗೌರವವನ್ನು ಕಾಪಾಡುವುದಕ್ಕಾಗಿ ಸುಬ್ಬಯ್ಯಗೌಡ ಎಲ್ಲವನ್ನೂ ಕಣ್ಣುಮುಚ್ಚಿಕೊಂಡು ಸಹಿಸುತ್ತಾ ಬಂದ.

ಸ್ವಂತ ಹಿಡುವಳಿಗಾರರಾಗಲಿ, ಗುತ್ತಿಗೆದಾರರಾಗಲಿ ಬೇಸಾಯ ಮಾಡಿದರೆ ಭತ್ತ ಮನೆಗೆ ಬರುವುದು. ಸ್ವಂತ ಹಿಡುವಳಿಯಲ್ಲಿಯೇ ಸಂಪಾದಿಸಲಾರದ ಸಹೋದರರಿಬ್ಬರು ಗೇಣಿ ಗದ್ದೆಯಲ್ಲಿ ಎಷ್ಟರಮಟ್ಟಿಗೆ ಸಂಪಾದನೆಮಾಡಬಹುದು? ಗೇಣಿ ಕೊಡುವುದು ಎಂಟು ಖಂಡುಗವಾಗಲಿ, ಒಂಭತ್ತು ಖಂಡುಗವಾಗಲಿ ಮನೋಭಾವನೆ ಒಂದೇ. ದಿನ ಕಳೆದ ಹಾಗೆಲ್ಲ ನಾವು ಸ್ವಂತ ಹಿಡುವಳಿದಾರರಲ್ಲ, ಗುತ್ತಿಗೆದಾರರೆಂಬ ಭಾವವೆ ಬಲವಾಗುತ್ತಾ ಬರುತ್ತಿತ್ತು. ಈಗ ಆ ಸಂಸಾರದಲ್ಲಿ ಒಮ್ಮನಸ್ಸಿನಿಂದ ಕೆಲಸ ಮಾಡಲು ಯಾರಿಗೂ ಮನಸ್ಸಿಲ್ಲ. ಎಷ್ಟು ಕೆಲಸ ಕಡಮೆ ಮಾಡದರೆ ಅಷ್ಟೇ ಲಾಭವೆಂಬ ಮನೋವೃತ್ತಿ ಮಾಡಿತ್ತು. ಸ್ವಂತ ಹಿಡು

ವಳಿ ಕಾಲದಲ್ಲಿ ಸಸಿನಟ್ಟಿ ಸಮಯ ಜ್ವರ ಉಕ್ಕುತ್ತಿದ್ದರೂ ನಟ್ಟಿಗೆ ಹೆಂಗಸರು ಹೋಗುತ್ತಿದ್ದರು. ಈಗ ಅವರಿಗೆ ಜ್ವರ ಬರುವುದು ಬೇಡ, ಅವರ ಮಕ್ಕಳಿಗೆ ಮೈಬಿಸಿಯಾದರೆ ಸಾಕು ತಾಯಿ ಹೋಗುತಿರಲಿಲ್ಲ.

ಸುಬ್ಬಯ್ಯ ಗೌಡನಟ್ಟಿಗೆ ಬರಲು ಮನೆಯಲ್ಲಿದ್ದ ಹೆಂಗಸರಿಗೆ ಹೇಳಿ ಗುರಪ್ಪಗೌಡ ಹೂಡಲು ಗದ್ದೆಗೆ ಹೋದರು. ಎರಡು ಸಾಲಾಗಿದ್ದ ಗದ್ದೆಗಳನ್ನು 'ತೆಳ್ಳೆ' ಮಾಡಿ ಸನಿ ಹಾಕಿ, ಹೆಂಗಸರು ಬರುವ ನಿರೀಕ್ಷಣೆಯಲ್ಲಿ ಮಧ್ಯಾಹ್ನದ ವರೆಗೂ ಗದ್ದೆಯಲ್ಲಿ ಅಣ್ಣ, ತಮ್ಮ ಕಾದರು. ಪುಟ್ಟಮ್ಮನಾಗಲಿ, ನಾಗಮ್ಮನಾಗಲಿ ಒಬ್ಬರೂ ಬರಲಿಲ್ಲ ಬೆಳಗಿನಿಂದ ದುಡಿದು ಬಳಲಿ ಹಸಿದು, ಬಹಳ ಸಮಯ ನಿರೀಕ್ಷಣೆಯಲ್ಲಿದ್ದು ಸುಬ್ಬಯ್ಯಗೌಡ ಮನೆಗೆ ಸುಳಿತಿಲ್ಲ, ಅಡುಗೆಮನೆಯಲ್ಲಿ ಒಲೆಯ ಮುಂದೆ ಪುಟ್ಟಮ್ಮ ಬೆಂಕಿ ಕಾಯಿಸುತ್ತಾ ಕುಳಿತಿದ್ದಳು. ಆಕೆ ಗದ್ದೆಗೆ ಬರುವ ಯೋಚನೆಯಲ್ಲಿಲ್ಲದಂತೆ ಕಾಣಿಸಿದಳು. ದುಡಿದು, ಹಸಿದು, ಕಾದು ಬಂದಿದ್ದ ಸುಬ್ಬಯ್ಯಗೌಡನಿಗೆ ಹೆಂಡತಿ ಹೀಗೆ ಕುಳಿತಿರುವುದನ್ನು ನೋಡಿ ಕೋಪ ನೆತ್ತಿಗೇರಿತು. ಒಲೆಯ ಹತ್ತಿರ ಹೋಗಿ ಸುಬ್ಬಯ್ಯಗೌಡ ಕೇಳಿದ, "ಬೆಂಕಿ ಹತ್ತಿರವೇಕೆ ಕುಳಿತಿರುವೆ."

ಅದೇ ರೀತಿಯಲ್ಲಿ ಬೆಂಕಿಯನ್ನು ಕಾಯುತ್ತಾ, ಸ್ವಲ್ಪ ನರಳುವ ಧ್ವನಿ ಧ್ವನಿಯಲ್ಲಿ ಪುಟ್ಟಮ್ಮ ಹೇಳಿದಳು, "ಮೈಕಯೆಲ್ಲಾ ಭಾರವಾಗಿದೆ, ಗಾಲಗಂಟು ನೋವು, ಕುಳಿತುಕೊಂಡಿದೆ."

"ಇವತ್ತು ನೆಟ್ಟಿ ಎಂದು ಗೊತ್ತಿಲ್ಲವೇ?"

"ಗೊತ್ತಿಲದೆ ಏನು? ಇಂದು ಹೊಸದೆ?"

"ಹಾಗೆ ಕಾಣುತ್ತದೆ, ಅದಕ್ಕೇ ಕೇಳುತಿರುವುದು. ಬೆಳಗ್ಗೆಯೇ ಬೊಗಳಬೇಕಾಗಿತ್ತು ನನ್ನ ತೆಗೆದುಕೊಂಡು ಹೋಗುವ ಜವಜ್ವರ ಬಂದಿದೆಯೆಂದು. ನಮ್ಮದೊತು ಬಿಡು, ಆ ಎತ್ತುಗಳನ್ನು ಸುಮ್ಮನೆ ಗೋಳಾಡಿಸಿದೆವಲ್ಲ."

"ಜವಜ್ವರ ಬರಲೆಂದು ಎಲ್ಲರೂ ಹಾರೈಸುತ್ತಾರೆ, ನಾನೂ ಹಾರೈಸುತ್ತಿದ್ದೇನೆ. ಅವರ ಮನೆ ಹಾಳಾಗುವುದಕ್ಕೆ ಆ ಚಿತ್ರಗುಪ್ತರನ್ನು ನನ್ನ ಮರೆತಿರಬೇಕು."

"ಸೂರಪ್ಪನ ಹೆಂಡತಿ ಎಲ್ಲಿ?"

"ನನಗೇನು ಗೊತ್ತು ? ಕೋಣೆಯೊಳಗಿರಬೇಕು ?"

"ನಿನಗೆಂತು ಹೊತುಕೊಂಡು ಹೋಗುವ ವ್ಯೆಕ್ಯೆ ಭಾರ ಬಂತು; ಅದು, ಏಕೆ ಬರಲಿಲ್ಲ ?"

"ನನಗೇನು ಗೊತ್ತು ? ನನ್ನ ಹತ್ತಿರ ಅದು ಹೇಳಲಿಲ್ಲ; ನಾನು ಅದರ ಹತ್ತಿರ ಕೇಳಲಿಕ್ಕೆ ಹೋಗಲಿಲ್ಲ."

ಕೋಪದಿಂದ ಬಂದಿದ್ದ ಸುಬ್ಬಯ್ಯಗೌಡ ಹೆಂಡತಿಯ ಕೊನೆಯ ಮಾತಿಗೆ ವಿವೇಕವನ್ನು ಕಳಕೊಂಡು ಕುಳಿತಿದ್ದ ಹೆಂಡತಿಯ ಬೆನ್ನಿನ ಮೇಲೆ ಬಲವಾಗಿ ಒದ್ದನು. ಆಕೆ ಮುಂದಕ್ಕೆ ಒಲೆಯ ಮೇಲೆ 'ಅಯ್ಯೋ' ಎಂದು ಕೂಗಿ ಕೈಯೂರಿದಳು. ಬೆಂಕಿಯಿಂದ ಕೈ ಸುಟ್ಟಿದ್ದಲ್ಲದೆ ಸೊಂಟಕ್ಕೆ ಜೋರಾಗಿ ಏಟು ಬಿದ್ದಿತ್ತು.

ನಾಗಮ್ಮ, ಭಾವ ಮತ್ತು ಅಕ್ಕನಿಗೆ ನಡೆಯುತಿರುವ ಮಾತುಕತೆಯನ್ನು ಕೇಳುತ್ತಾ ಕೋಣೆಯೊಳಗೆ ಮಲಗಿದಳು. ಆಕೆ 'ಅಯ್ಯೋ' ಎಂದು ಕೂಗಿಕೊಂಡಾಗ ಅದರ ಕಾವು ಇವಳಿಗೆ ತಾಗಿತು. ಈ ಅನರ್ಥಕ್ಕೆ ಒಂದು ರೀತಿಯಲ್ಲಿ ಈಕೆಯೇ ಮೂಲ ಕಾರಣ. ಆಕೆಯ ಒಬ್ಬ ಮಗ ತಲೆನೋವು ಅವ್ವ ಮಲಗುತ್ತೇನೆಂದು ಬಂದಾ; ಅವನಿಗೆ ಹಾಸಿಗೆ ಹಾಸಿ ಕೊಡಲು ಕೋಣೆಯೊಳಗೆ ಹೋದಳು. ಮಗನಿಗೆ ಹಾಸಿಗೆ ಹಾಸಿ ಅವನ ಹತ್ತಿರ ಕುಳಿತುಕೊಂಡು ತಲೆ ತಿಕ್ಕಿದಳು. ಹೊರಗೆ ಮಳೆ ಗಾಳಿ ವಿಪರೀತ. ಒಳಗೆ ಬೆಚ್ಚಗೆ ಮಗನಿಗೆ ತಲೆಯುಜ್ಜುತ್ತಾ ಅಲ್ಲಿಯೇ ಮಲಗಿಕೊಂಡವಳಿಗೆ ತಿರುಗಿ ಏಳಲು ಮನಸ್ಸು ಬರಲಿಲ್ಲ. ಮಲಗಿದ್ದಲ್ಲಿಯೇ ಮನಸ್ಸಿನಲ್ಲಿ ಅಂದುಕೊಂಡಳು—ಈ ಮಳೆ ಗಾಳಿಯಲ್ಲಿ ಯಾರು ಗದ್ದೆಗೆ ಹೋಗುತ್ತಾರೆ ? ಎಷ್ಟು ದುಡಿದರು ಈ ಜೀವನ ತಪ್ಪುವುದಿಲ್ಲ. ತಂಗಿ ಕೋಣೆಯಿಂದ ಹೊರಡದಿದ್ದುದನ್ನು ನೋಡಿ, ಅಕ್ಕ ಬೆಂಕಿ ಹತ್ತಿರ ಕುಳಿತುಕೊಂಡಳು. ಅಕ್ಕನಿಗೆ ಒದೆ ಬಿದ್ದು ಕೂಗಿಕೊಂಡ ಕೂಡಲೇ ತಂಗಿ ಕಾಲ ಹತ್ತಿರವಿದ್ದ ಕಂಬಳಿಯನ್ನು ಮೈತುಂಬಾ ಬಲವಾಗಿ ಹೊದ್ದುಕೊಂಡು, ತನ್ನ ಗಂಡ ಬಂದ ಕೂಡಲೇ ಆಗುವ ವಿಚಾರಣೆಗೆ ತಕ್ಕ ಸಿದ್ಧತೆಯ ಯೋಚನೆಯಲ್ಲಿದ್ದಳು.

ಗುರಪ್ಪಗೌಡ ಮನೆಗೆ ಬಂದ. ಮನೆಯಲ್ಲಿ ಒಬ್ಬರೂ ಕಾಣಿಸಲಿಲ್ಲ ಅಣ್ಣನ ಕೋಣೆಯಿಂದ ಮಾತು ಕೇಳಿ ಬಂತು. ಅದನ್ನು ಕೇಳುತ್ತಾ ಗುರಪ್ಪಗೌಡ ತನ್ನ ಕೋಣೆಯೊಳಗೆ ಬಂದ. ಮಲಗಿಕೊಂಡಿರಬೇಕೆಂದು ಮನಸ್ಸನ್ನು ಗಟ್ಟಿಮಾಡಿಕೊಂಡಿದ್ದ ನಾಗಮ್ಮನ ಗಂಡನ ಹೆಜ್ಜೆಯ ಶಬ್ದ ಕೇಳಿದ ಕೂಡಲೆ ಎದ್ದು ಕುಳಿತಳು. ಪೀಠಿಕೆ ಇಲ್ಲದೆ ಗುರಪ್ಪಗೌಡ ಕೇಳಿದ, "ಏಕೆ ಮಲಗಿರುವೆ?"

ನಾಗಮ್ಮ—ಹುಡುಗನಿಗೆ ತಲೆ ನೋವಂತೆ, ಜ್ವರ ಬರುವ ಹಾಗಿದೆ.

ಮಂಜಪ್ಪ—ಹುಡುಗನಿಗೊ ಹುಡುಗನ ತಾಯಿಗೊ.

ನಾಗಮ್ಮ—ಎಲ್ಲ ಅದನ್ನೇ ಬಯಸುತ್ತಾರೆ, ಅದು ಬರುವುದಿಲ್ಲ.

ಮಂಜಪ್ಪ—ಈ ಮಳೆ, ಗಾಳಿ, ಚಳಿಯಲ್ಲಿ ಮನೆಯೊಳಗೆ ಬೆಚ್ಚಗೆ ಮಲಗಿಕೊಂಡಿದ್ದರೆ ಎಂಥವರಿಗೂ ಜ್ವರ ಬಂದ ಹಾಗೆ ಕಾಣುತ್ತದೆ. ಅದಕ್ಕೆ ನಾವು ಮಧ್ಯಾಹ್ನ ಮನೆಗೆ ಊಟಕ್ಕೆ ಬರದೆ ಗದ್ದೆಗೆ ಊಟ ತರಿಸಿ ಕೊಳ್ಳುವುದು. ಮನೆಯೊಳಗೆ ಬಂದೆ, ಬೆಚ್ಚಗಿದೆ, ನನಗೂ ಜ್ವರ ಬಂದ ಹಾಗೆ ಕಾಣುತ್ತದೆ. ಇವತ್ತೇಕೆ ನೀವ್ಯೊಬ್ಬರು ಬರಲಿಲ್ಲ, ಅನ್ನವನ್ನೂ ಕಳು ಹಿಸಲಿಲ್ಲ? ನನಗೆ ಹಸಿವಾಗುತ್ತಿದೆ ಬಡಿಸು ಬಾ.

ಗಂಡನಿಗೆ ಕುಳಿತುಕೊಳ್ಳುವಂತೆ ನಾಗಮ್ಮ ಸಂಜ್ಞೆ ಮಾಡಿದಳು. ಗುರಪ್ಪಗೌಡ ಅಲ್ಲಿಯೇ ಕುಳಿತುಕೊಂಡು ಮಗನ ಮೈ, ತಲೆ ಮುಟ್ಟಿ ನೋಡಿದ. ಗಂಡನ ಹತ್ತಿರ ಸರಿದು ನಾಗಮ್ಮ ಮನೆಯಲ್ಲಿ ಒಂದು ಗಳಿಗೆಯ ಹಿಂದೆ ನಡೆದ ಘಟನೆಯನ್ನು ವಿವರಿಸಿ, ಸಹೋದರರಿಬ್ಬರಿಗೂ ಬಡಿಸಲು ಅಡುಗೆಯ ಮನೆಗೆ ಹೋದಳು.

ಊಟ ಮುಗಿಸಿಕೊಂಡು ಬಂದವರು ತಿರುಗಿ ಒಬ್ಬರೂ ಗದ್ದೆ ಕಡೆ ಮುಖ ಹಾಕಲಿಲ್ಲ. ಸುಬ್ಬಯ್ಯಗೌಡನಿಗೆ ಹೆಂಡತಿಯ ಆರೈಕೆ ಸರಿಯಾಗಿ ಮುರಪ್ಪಗೌಡನ ಹೆಂಡತಿಗೆ ತೊಟ್ಟಿಗೆ ಮುರ ಅಡಿಗೆ ಈ ಕೆಲಸವೇ ದಿನವೆಲ್ಲ ಹಿಡಿಯುತ್ತಿತ್ತು. ಸ್ವಂತ ಹಿಡುವಳಿದಾರರಾಗಿದ್ದಾಗ ಇಂಥಾ ವಿಪತ್ತು ಬಂದೊದಗಿದರೆ ಕೂಲಿ ಕೊಟ್ಟು ನಡೆಸುತ್ತಿದ್ದರು. ಇವರೇ ಗುತ್ತಿಗೆ ಮಾಡುವವರು! ಇವರಿಗೆ ಕೂಲಿಕೊಟ್ಟು ನಡೆಸಲು ಸಾಧ್ಯವೇ? ಕೂಲಿ ಕೊಟ್ಟು ನಡೆಸುವ ಪ್ರಸಂಗ ಬಂದರೂ ಕೂಲಿ ಕೊಡಲು

ಹಣವೆಲ್ಲಿ? ಜಮೀನುದಾರರ ಭೂಮಿಯನ್ನು ಗೇಣಿಗೆ ಮಾಡಿದ್ದರೆ ಇಂಥ ವಿಪತ್ತಿನಲ್ಲಿ ಜಮೀನು ಬೀಳುಬೀಳುವುದನ್ನು ನೋಡಿ ಹಣಕಾಸಿನ ಸಹಾಯ ಮಾಡುತ್ತಿದ್ದರು. ಇಲ್ಲಿ ಅದಕ್ಕೆ ಅವಕಾಶವಿಲ್ಲ. ಜೋಲು ಮುಖ ಹಾಕಿಕೊಂಡು ಅಣ್ಣತಮ್ಮಂದಿರಿಬ್ಬರೂ ಮನೆಯಲ್ಲಿ ಬೆಚ್ಚಗೆ ಕುಳಿತು ಮಳೆಗಾಲ ಕಳೆದರು. ಒಂದು ಗಳಿಗೆಯ ಅನರ್ಥಕ್ಕೆ ಪುಟ್ಟಮ್ಮ ಎರಡು ತಿಂಗಳು ಹಾಸಿಗೆ ಹಿಡಿದು ನರಳಿದಳು. ಆ ವರ್ಷ ಬೇಸಾಯ ನಡೆಯಲಿಲ್ಲ.

## ಹತ್ತು

ಎರಡು ತಿಂಗಳ ನಂತರ ಪುಟ್ಟಮ್ಮ ಸೊಂಟ ಹಿಡಿದುಕೊಂಡು ಮನೆಯೊಳಗೆ ತಿರುಗಾಡುವ ಹಾಗಾದಳು.

ಬೇಸಾಯ ಮಾಡುವಾಗಲೇ ಹೊಟ್ಟೆಗಿದ್ದರೆ ಬಟ್ಟೆಗಿರುತಿರಲಿಲ್ಲ, ಬಟ್ಟೆಗಿದ್ದರೆ ಹೊಟ್ಟೆಗಿರುತಿರಲಿಲ್ಲ. ಜಮೀನು ಬೀಳುಬಿದ್ದ ತರುವಾಯ ಆ ಪರಿವಾರದ ಸ್ಥಿತಿ ಅವರ್ಣನೀಯವಾಯಿತು.

ಈ ಪ್ರಪಂಚದಲ್ಲಿ ಮಾತನಾಡುವ ದೇವರು ನೂರಾರು. ಅವು ಕಷ್ಟದಲ್ಲಿ ನೆರವಾಗುವುವು; ಸುಖದಲ್ಲಿ ಸಂತೋಷಪಡುವುವು; ಸಮಯವೆಂದರೆ ಹಣಕಾಸಿನ ಸಹಾಯಮಾಡುವುವು; ಸರಿಯಾಗಿ ಬೆಳೆಯಾಗದಿದ್ದರೆ ರಿಯಾಯಿತಿ ತೋರಿಸುವುವು; ತಮ್ಮ ಜಮೀನು ಬಂಜರು ಬೀಳಲು ಅವಕಾಶಕೊಡುವುದಿಲ್ಲ. ಅಣ್ಣೇಗುಡ್ಡೆ ದೇವರಿಂದ ಇದೆಲ್ಲ ಸಾಧ್ಯವೆ?

ಜಮೀನನ್ನು ಭೋಗಿಸುವ ಅಧಿಕಾರ ಸುಬ್ಬಯ್ಯಗೌಡ ಗುರಪ್ಪಗೌಡರಿಗಿತ್ತೇ ವಿನಾ ಯಾವ ವಿಧದಲ್ಲಿಯೂ ಪರಭಾರೆಮಾಡುವ ಹಾಗಿರಲಿಲ್ಲ. ಸ್ವಂತ ಹಿಡುವಳಿದಾರರಾಗಿದ್ದಾಗ ಕೈಬೀಸಿದರೆ ಎಲ್ಲಿಯಾದರು ಸಾಲ ಸಿಗುತಿತ್ತು- ಈಗ ತಮ್ಮ ತಲೆಯ ಮೇಲೆ ತಮ್ಮ ಕೈ ಎನ್ನುವ ಸ್ಥಿತಿ. ಜಮೀನದಾರರಲ್ಲಿ ಗುತ್ತಿಗೆಗೆ ರೂಢಿಸಿಕೊಂಡಿದ್ದರೆ ಸಮಯದಲ್ಲಿ ಅವರು ಸಹಾಯಮಾಡುತ್ತಾರೆ. ಸ್ವಂತ ಹಿಡುವಳಿದಾರರಲ್ಲದಿರುವುದರಿಂದ ಅಣ್ಣೇಮಕ್ಕಿಯವರಿಗೆ ಯಾರು ಸಾಲಕೊಡುವುದಿಲ್ಲ; ಇವರು ಜಮೀನು ಮಾಡಿಕೊಂಡಿರುವ 'ಧಣಿ' ತೆಗೆದುಕೊಳ್ಳುವುದು ಬಲ್ಲರೇ ವಿನಾ ಕೊಡುವುದನ್ನರಿಯದು. ಕಷ್ಟಗಾಲವೆಂದು ಕಣ್ಣೀರು ಸುರಿಸಿ,

ಹಣ್ಣು ಕಾಯಿ ಒಡೆದು ಕಾಣಿಕೆ ಹಾಕಿದರೆ, ನಾವು ಕೊಟ್ಟಿರುವ ಕಾಯಿ, ಹೂವಿನಲ್ಲಿ ಅರ್ಧ ತೆಗೆದುಕೊಂಡು ಅರ್ಧ ಪ್ರಸಾದವೆಂದು ಕೊಡುವುದು. ಇಂಥ 'ಧಣಿ' ಯನ್ನು ನಂಬಿಕೊಂಡು ರೈತರು ಎಷ್ಟುಕಾಲ ಬದುಕಿರ ಬಲ್ಲರು?

ಇದ್ದಕ್ಕಿದ್ದಂತೆ ಮಂಜಪ್ಪಗೌಡ ಎರಡು ದಿವಸ ಅದೃಶ್ಯನಾದ. ಮನೆಬಿಟ್ಟು ಒಂದು ರಾತ್ರಿ ಎಲ್ಲಿಯೂ ಉಳಿಯುತಿರಲಿಲ್ಲ. ಅವನು ಎರಡು ದಿನ ಮನೆಬಿಟ್ಟಿದ್ದು ಯಾರಿಗೂ ನೆನಪಿಲ್ಲ. ಮದುವೆಯಾದ ವರ್ಷ ಅತ್ತೆ ಮನೆಯಲ್ಲಿ ಎರಡುಸಾರಿ, ಎರಡು ದಿನವಿದ್ದ. ನಂತರ ಇಲ್ಲದಿರುವುದು ಇದೇ ಪ್ರಥಮ. ಅವನ ಹೆಂಡತಿ ಅನೇಕ ರೀತಿಯಲ್ಲಿ ಯೋಚಿಸಿದಳು. ಸುಬ್ಬಯ್ಯಗೌಡನು ನಾಲ್ಕೈದು ಸಾರಿ ನಾಗಮ್ಮನನ್ನು ಕೇಳಿದ. ಮೂರ ನೆಯ ದಿನ ಮಧ್ಯಾಹ್ನ ಊಟದ ಹೊತ್ತಿನಲ್ಲಿ ಗುರಪ್ಪಗೌಡ ಮನೆಗೆ ಬಂದ. ಗಂಡನು ಸುಖವಾಗಿ ಹಿಂತಿರುಗಿ ಬಂದಿದ್ದರಿಂದ ನಾಗಮ್ಮನಿಗೆ ಅಪರಿಮಿತ ಆನಂದವಾಯಿತು.

ಮದುವೆಯಾದಂದಿನಿಂದ ಇದುವರೆಗೂ ಗಂಡನೊಂದಿಗೆ ಸಂಸಾರದ ಚಿಂತೆಯಲ್ಲಿಯೇ ದುಡಿಯುತಿದ್ದ ನಾಗಮ್ಮನಿಗೆ ವಿರಹದ ಪ್ರಥಮ ಅನು ಭವ ಯೌವನದ ಇಳಿಮುಖದಲ್ಲುಂಟಾಯಿತು. ತಿಂಗಳು, ವರ್ಷಗಟ್ಲೆ ವಿರಹಾಗ್ನಿಯಲ್ಲಿ ಬೇಯುವ ದೇವಿಯರನ್ನು ಮನಸ್ಸಿನಲ್ಲಿ ವಂದಿಸಿ ಅಂದು ಕೊಂಡಳು....ಅಮ್ಮಾ ತಾಯಂದಿರಾ ನಿಮ್ಮ ತಪಸ್ಸು ನನ್ನನ್ನು ಕಾಪಾಡಿತು.

ಏಕಾಂತದಲ್ಲಿ ಕಾಂತನನ್ನು ನೋಡಿ ಕೋಪದ ನಟನೆಯಲ್ಲಿ ನಾಗಮ್ಮ ಹೇಳಿದಳು, "ಇದ್ದಕ್ಕಿದ್ದಂತೆ ಹೀಗೆ ಮಾಯವಾದರೆ ಮನೆಯಲ್ಲಿ ರುವವರು ಏನೆಂದು ಯೋಚಿಸಬೇಕು? ಹೋಗುವಾಗ ಏಕೆ ಹೇಳಿ ಹೋಗಬಾರದು?"

"ಮನೆ ಬಿಡುವಾಗ ಒಂದು ಯೋಚನೆಯಿಂದ ಹೊರಡುತ್ತೀವೆ, ಮಧ್ಯೆ ಬೇರೊಂದು ವಿಘ್ನವೋ ಕೆಲಸವೋ ಬಂದು ಹೀಗಾಗುತ್ತದೆ. ಒಂದೆರಡು ದಿನಕ್ಕೆ ಇಷ್ಟೊಂದು ಗಾಭರಿಯಾದರೆ, ಹೆಂಗಸರು, ಮಕ್ಕಳನ್ನು ಬಿಟ್ಟು ಕೆಲವು ಪುಣ್ಯಾತ್ಮರು ದೇಶಾಂತರದಲ್ಲಿರುತ್ತಾರೆ. ಅವರ ಗತಿ ಏನಾಗಬೇಕು?"

"ಅವರಿಗೆ ಗೊತ್ತಿರುತ್ತದೆ; ಕಾಗದಪತ್ರ ಬರುತ್ತಿರುತ್ತದೆ."

"ಕಾಗದ ಬರೆಯದಿರುವುದು ನನ್ನ ತಪ್ಪಾಯಿತು."

ಗಂಡನನ್ನು ನೋಡಿ, ಕತ್ತನ್ನು ಒಳಕಿಸಿ ನಾಗಮ್ಮ ಹೇಳಿದಳು, "ಬಾಯಲ್ಲಿ ನೂರೊಂದು ಮಾತನ್ನು ಹೇಳಬಹುದು. ಮನೆಯಲ್ಲಿದ್ದ ನಮಗೆ ಗಳಿಗೆಗಂಡಾತರವಾಗುತ್ತದೆ."

"ವಿರಹದ ಕಥೆ ಆಮೇಲೆ; ಇಲ್ಲಿ ಕುಳಿತುಕೊ ಹೇಳುತ್ತೇನೆ." ಎಂದು ಗುರಪ್ಪಗೌಡ ಅಲ್ಲಿಯೇ ಕುಳಿತುಕೊಂಡ. ನಾಗಮ್ಮನೂ ಕುಳಿತುಕೊಂಡಳು. ಬಾಗಿಲ ಕಡೆ ನೋಡಿ ಗುರಪ್ಪಗೌಡ ಹೇಳಿದ, "ಮನೆಯ ಸ್ಥಿತಿ ನಿನಗೆ ಗೊತ್ತಿದೆ, ಹೀಗೆ ಎಷ್ಟು ದಿನ ಜೀವಿಸುವುದು? ಕೆರೆ ತೋಟದಲ್ಲಿ ಐದು ಖಂಡುಗ ಗದ್ದೆ ಗುತ್ತಿಗೆಗೆ ಮಾಡಿಕೊಂಡು ಬಂದಿದ್ದೇನೆ. ಅದಕ್ಕೆ ಇಷ್ಟು ದಿನ ತಡವಾಯಿತು. ಬಂದಮೇಲೆ ಎಲ್ಲ ಮುಗಿಸಿಕೊಂಡು ಹೋಗೋಣವೆಂದು ಕುಳಿತುಕೊಂಡೆ. ಕುಳಿತಿದ್ದಕ್ಕೆ ಕೆಲಸವಾಯಿತು. ಊಳುವುದಕ್ಕೆ ಒಂದು ಜೊತೆ ಎತ್ತು ಕೊಡುವುದಲ್ಲದೆ ನೂರು ರೂಪಾಯಿ ನಗದು, ಇಪ್ಪತ್ತು ಖಂಡುಗ ಭತ್ತ ಸಾಲಕೊಡುತ್ತಾರೆ. ಅವರ ಜಮೀನು ರೂಢಿಸುತಿರುವವರೆಗೂ ವರ್ಷವರ್ಷವೂ ಹಣದ ಬಡ್ಡಿಯನ್ನು ಸಂದಾಯ ಮಾಡುತ್ತಿದ್ದರೆ ಸರಿ; ಭತ್ತ ಮಾತ್ರ ಗುತಿಗೆಯ ಜೊತೆಯಲ್ಲಿ ಅಳೆಯಬೇಕು."

"ಮನೆ ಬಿಡಬೇಕೆ?"

"ವಾಸಕ್ಕೆ ಈಗ ಅಲ್ಲಿ ಅನುಕೂಲವಿಲ್ಲ. ಇಲ್ಲಿ ಇದ್ದುಕೊಂಡು ಈ ವರ್ಷ ಬೇಸಾಯಮಾಡೋಣ. ಅಷ್ಟರಲ್ಲಿ ಇವರೆಲ್ಲ ಏನು ಮಾಡುತ್ತಾರೆ ಗೊತ್ತಾಗುತ್ತದೆ. ಈಗ ತಕ್ಷಣ ಮನೆ ಬಿಡುವುದು ಬೇಡ."

"ಅಷ್ಟುದೂರ ಹೋಗಿ ಬೇಸಾಯಮಾಡಲು ಸಾಧ್ಯವೇ"

"ಕಷ್ಟ, ಹೌದು! ಎಷ್ಟು ಜನ ಮಾಡುತ್ತಿಲ್ಲ? ಹೊಟ್ಟೆಗಿಲ್ಲದೆ ಸಾಯುವುದಕ್ಕಿಂತ ಇದು ಉತ್ತಮ."

"ಅದೇನೋ ಸರಿ, ನನಗೆ ಮನಸ್ಸಿನಲ್ಲಿ ಏನೋ ಒಂದು ತರ ಆಗುತ್ತದೆ."

"ಹೆಂಗಸರ ಹಣೆಬರವೇ ಹಾಗೆ. ತೌರುಮನೆ ಬಿಟ್ಟು ಗಂಡನ ಮನೆಗೆ ಬರುವಾಗ ಮನಸ್ಸಿನಲ್ಲಿ ಏನೋ ಒಂದು ತರ ಆಗುತ್ತದೆ; ಪ್ರಥಮ ಬಾರಿ ಸಂಸಾರ ಹೂಡುವಾಗ ಮನಸ್ಸಿನಲ್ಲಿ ಏನೋ ಒಂದು ತರ ಆಗುತ್ತದೆ. ಒಗ್ಗುವ ಮೊದಲು ಮನಸ್ಸಿನಲ್ಲಿ ಏನೋ ಒಂದು ತರವಾಗುವುದು ಒಗ್ಗಿದ ಮೇಲೆ ವಿರಹ."

ಈ ಸಾರಿ ನಾಗಮ್ಮನಿಂದ ನಗು ತಡೆಯಲಾಗಲಿಲ್ಲ. ನಗುತ್ತಾ ಹೇಳಿದಳು, "ಅಯ್ಯೋ ದೇವರೆ! ಗಂಡಸರಿಗೆ ಇವೆಲ್ಲ ಹೇಗೆ ಗೊತ್ತು?"

"ಹೆಂಗಸರು ಹೇಳುವುದರಿಂದ."

"ಭಾವ ಏನುಮಾಡುತ್ತಾರೆ?"

"ನೋಡಬೇಕು."

"ಅವರಿಗೆ ಗೊತ್ತಿಲ್ಲವೆಂದು ಕಾಣುತ್ತದೆ?"

"ಇನ್ನು ಗೊತ್ತಿಲ್ಲ, ಗೊತ್ತಾಗುತ್ತದೆ."

ಹೆಂಡತಿಯ ಹತ್ತಿರ 'ಇನ್ನೂ ಗೊತ್ತಿಲ್ಲ' ಎಂದು ಹೇಳಿ ಗುರಪ್ಪ ಹೊರಗೆ ಬಂದ. ಸುಬ್ಬಯ್ಯಗೌಡನಿಗೆ ತಮ್ಮ ಕೆರೆ ತೋಟದಲ್ಲಿ ಗುತ್ತಿಗೆಗೆ ಜಮಾನು ಮಾಡಿದ ವಿಚಾರ ತಿಳಿದಿತ್ತು. ಅವನ ಬಾಯಿಯಿಂದ ಮೊದಲು ಬರಲೆಂದು ಗೊತ್ತಿದ್ದರೂ ಸುಬ್ಬಯ್ಯಗೌಡ ಸುಮ್ಮನಿದ್ದ. ಅಣ್ಣನಿಗೆ ಹೇಗೂ ಗೊತ್ತಾಗುತ್ತದೆ, ಅವನೇ ಕೇಳಿದರೆ ಹೇಳುವುದು, ಇಲ್ಲದಿದ್ದರೆ ನಾನೇ ಏಕೆ ಹೇಳಲು ಮುಂದೆ ಹೋಗಲಿ ಎಂದು ಗುರಪ್ಪಗೌಡ ಸುಮ್ಮನಿದ್ದ.

ತಮ್ಮ ಬೇರೆ ಕಡೆ ಜೀವನಕ್ಕೆ ದಾರ್ಗ ಹುಡುಕಿದ ಮೇಲೆ ಅಣ್ಣನೂ ಏನಾದರೊಂದು ದಾರಿ ಹುಡುಕಬೇಕು. ತಮ್ಮ ಹುಡುಕಿದ ಸುಲಭ ಮಾರ್ಗ ವಿದ್ದುದರಿಂದ ಅದನ್ನೇ ಅವನೂ ಹಿಡಿದ. ಸಂಪಾದನೆ ಬೇರೆಯಾದ ಮೇಲೆ ಅಡುಗೆ ಬೇರೆಯಾಗಬೇಕು. ಮನೆಯಲ್ಲಿ ಅಕ್ಕಿ ಇರುವವರೆಗೂ ಒಂದೇ ಒಲೆಯಲ್ಲಿ ಅನ್ನ ಬೆಂದಿತ್ತು. ಅಕ್ಕಿ ಮುಗಿದ ಮೇಲೆ ಯಾರೂ ಅಕ್ಕಿ ತರ ಲಿಲ್ಲ. ಮಧ್ಯಾಹ್ನದವರೆಗೆ ಮಕ್ಕಳೆಲ್ಲ ಉಪವಾಸವಿದ್ದರು. ಮಧ್ಯಾಹ್ನ ಮಗುಟದ ಮೇಲೆ ಅಳು ಪ್ರಾರಂಭವಾಯಿತು. ಮಕ್ಕಳ ಸಂಕಟವನ್ನು ನೋಡಲಾರದೆ ನೆರೆಮನೆಯಿಂದ ನಾಗಮ್ಮ ಅಕ್ಕಿ ಕಡ ತಂದು ತಮ್ಮ ಕೋಣೆಯಲ್ಲಿ ಒಲೆ ಹತ್ತಿಸಿ ಅನ್ನ ಮಾಡಿ ತಮ್ಮ ಮಕ್ಕಳಿಗೆ ಬಡಿಸಿದಳು.

ಸಾಯಂಕಾಲದ ಹೊತ್ತಿನಲ್ಲಿ ಪುಟ್ಟವ್ವನು ಅಕ್ಕಿ ಕಡಕಂದು ತವ್ವು ಕೋಣೆಯಲ್ಲಿ ಅನ್ನಮಾಡಿ ತನ್ನ ಮಕ್ಕಳಿಗೆ ಅನ್ನ ಬಡಿಸಿದಳು. ಹೀಗೆ ಒಂದೇ ಮನೆಯಲ್ಲಿ, ಎರಡು ಕಡೆ ಹೊಗೆಯಾಡಿತು; ಎರಡು ಕಡೆ ಅನ್ನ ಬೆಂದಿತ್ತು. ನಂತರ ಹುಡುಗರು ಉಪವಾಸ ಬೀಳುತ್ತಿರಲಿಲ್ಲ.

ಎರಡು ಕಡೆ ಅನ್ನ ಬೇಯಬೇಕಾದರೆ ಇಬ್ಬರಿಗೂ ಪಾತ್ರೆಬೇಕು. ಇದ್ದ ಪಾತ್ರೆ, ಸಾಮಾನುಗಳನ್ನು ಇಬ್ಬರೂ ಹಂಚಿಕೊಂಡರು. ಮನೆಯ ಪದಾರ್ಥಗಳನ್ನು ಭಾಗ ಮಾಡಿಕೊಂಡ ಮೇಲೆ ಅಣ್ಣ, ತಮ್ಮ ಹಿಸ್ಸೆಮಾಡಿಕೊಂಡಂತೆ ಜಮೀನನ್ನು ಭೋಗಿಸಬಹುದೆ ವಿನಾ ಹಿಸ್ಸೆಮಾಡಿಕೊಳ್ಳುವ ಹಾಗಿಲ್ಲ. ಭೋಗದ ಹಕ್ಕನ್ನು ಹಿಸ್ಸೆ ಮಾಡಿಕೊಳ್ಳಬಹುದು, ಆದರೆ, ಆಗಲೇ ಬೀಳು ಬಿದ್ದಿರುವುದರಿಂದ ಭೋಗಿಸುವ ಹಕ್ಕನ್ನು ವಿಭಾಗಿಸಿಕೊಳ್ಳುವುದರಿಂದ ಪ್ರಯೋಜನ ಕಾಣಲಿಲ್ಲ. ರೈತರ ಇತಿಹಾಸದಲ್ಲಿ ಪಂಚಾಯಿತಿ, ಕೋರ್ಟುಗಳಿಗೆ ಹೋಗದೆ ಅಣ್ಣತಮ್ಮಂದಿರೇ ವಿಭಾಗ ಮಾಡಿಕೊಂಡಿದ್ದು ಇದೇ ಪ್ರಥಮ. ಸ್ವಂತ ಹಿಡುವಳಿದಾರರಾಗಿದ್ದಾಗ ಜಮೀನಿನ ಕ್ರಯಪತ್ರ ಯಾರ ಹೆಸರಿಗಾಗಬೇಕೆಂಬ ವಿಚಾರದಲ್ಲಿ ಮತಭೇಧವಿರುತ್ತಿತ್ತು. ಅಣ್ಣೀಗುಡ್ಡೆ ದೇವರ ಹೆಸರಿಗೆ ಕ್ರಯಪತ್ರವಾಗುವವರೆಗೂ ಆ ಮತಭೇದವಿತ್ತು. ಈಗ ವಿಭಾಗ ಮಾಡಿಕೊಳ್ಳುವಾಗ ಇಬ್ಬರಲ್ಲಿಯೂ ಭೇದ ಭಾವವಿರಲಿಲ್ಲ. ಕಾರಣವಿಷ್ಟೆ? ಈಗ ಅವರು ಸ್ವಂತ ಹಿಡುವಳಿದಾರರಲ್ಲ; ಒಬ್ಬ ಅಣ್ಣ ಇನ್ನೊಬ್ಬ ತಮ್ಮನಲ್ಲ; ಒಬ್ಬನು ಹಿರಿಯುವನು, ಇನ್ನೊಬ್ಬನು ಕಿರಿಯುವನಲ್ಲ; ಇಬ್ಬರೂ ಗೇಣಿ ಗುತ್ತಿಗೆದಾರರು.

ಒಂದೇ ಕೂಲಿ ಸಂಪಾದಿಸುವಾಗ ಕೂಲಿಯವರಲ್ಲಿ ಮತಭೇದ ಹುಟ್ಟುವುದು ಇನ್ನು ಸರಿಸಮಾನರಾದ ಗೇಣಿಗುತ್ತಿಗೆದಾರರಲ್ಲಿ ಮತಭೇದ ಬರಲು ಕಾರಣವಿಲ್ಲ.

ಅಣ್ಣತಮ್ಮಂದಿರಿಬ್ಬರೂ ಪಂಚಾಯಿತರ ಸಹಾಯವಿಲ್ಲದೆ ಹಿಸ್ಸೆಮಾಡಿಕೊಂಡಿದ್ದಕ್ಕಿಂತ ಆಶ್ಚರ್ಯಕರವಾದ ಸಂಗತಿ ಇನ್ನೊಂದು ನಡೆಯಿತು. ಇಬ್ಬರೂ ಸ್ವಂತ ಹಿಡುವಳಿದಾರರಾಗಿದ್ದರೆ ಹಿಸ್ಸೆಯ ಪಾರಿಖತ್ತು ಪತ್ರ ಛಾಪಾ ಕಾಗದದ ಮೇಲಾಗಿ ಅದನ್ನು ರಿಜಿಸ್ಟರು ಮಾಡಬೇಕಿತ್ತು. ಈಗ ಆ ಖರ್ಚು ಉಳಿಯಿತು. ಅಣ್ಣೀಮಕ್ಕಿ ಜಮೀನು ಬೀಳು ಬಿದ್ದಿದ್ದರಿಂದ

ಅಣ್ಣೀಗುಡ್ಡೆ ದೇವರಿಗೆ ಗುತ್ತಿಗೆ ಭತ್ತ ಕೊಡಲಿಲ್ಲ; ಜಮೀನು ಬಂಜರು ಬಿದ್ದಿದ್ದರಿಂದ ದೇವಸ್ಥಾನದ ಪಾರುಪತ್ತೆಗಾರರೂ ಗುತ್ತಿಗೆ ಕೇಳಲಿಲ್ಲ. ಕಂದಾಯವೂ ಬಾಕಿ ನಿಂತಿತು.

ಒಂದು ಜಮೀನಿನ ಕ್ರಯ ಪತ್ರಕ್ಕೆ ತಗಲುವ ಹಣ, ಆ ಜಮೀನಿನ ಬೆಲೆಗೆ ಸರಿಸಮಾನವಾದಾಗ ಆ ಜಮೀನಿನ ಕ್ರಯಪತ್ರ, ಕಂದಾಯ; ದೇವರ ಸೊತ್ತು ದೇವರಿಗಾದ ಮೇಲೆ ಕಂದಾಯ ಕೊಡುವವರು ಯಾರು? ತೆಗೆದುಕೊಳ್ಳುವವರು ಯಾರು? ಪೂಜಾದಿಗಳನ್ನು ಸಲ್ಲಿಸಿ ಪ್ರಸಾದವನ್ನು ಸ್ವೀಕರಿಸುವ ಅಧಿಕಾರ ಎಲ್ಲರಿಗೂ ಇರುವಂತೆ ದೇವರ ಆಸ್ತಿಯನ್ನು ಬಳಸುವ ಹಕ್ಕು ಎಲ್ಲರಿಗೂ ಇರುತ್ತದೆ. ದೇವರ ಮಹಿಮೆ ಅಪಾರವಾದುದರಿಂದ ಮನುಷ್ಯ ಉಪಯೋಗದಿಂದ ಹಿಡಿದು ದನಕರು; ಹುಲಿ, ಚಿರತೆಗಳ ಉಪಯೋಗದವರೆಗೂ ದೇವರ ಆಸ್ತಿ ಬರುತ್ತದೆ.

ಜೀವನಕ್ಕೆ ಅತ್ಯಾವಶ್ಯಕವಾದ ಆಹಾರವನ್ನು ಕೊಡುವ ಹಿಡುವಳಿ ದೇವರ ಮಹಿಮೆಯಾಗಲಿ, ಕೋರ್ಟಿನ ಅಧಿಕಾರಕ್ಕಾಗಲಿ ಒಳಪಟ್ಟ ತಕ್ಷಣ ಮನುಷ್ಯ ಉಪಯೋಗದಿಂದ ತಪ್ಪಿ ಸೃಷ್ಟಿಯ ಸಮಸ್ತ ಪ್ರಾಣಿಗಳು ಉಪಯೋಗಕ್ಕೆ ಬರುತ್ತದೆ. ವರ್ಷ ವರ್ಷವೂ ಜನಸಂಖ್ಯೆ ಬೆಳೆಯುತ್ತಿರುವಂತೆ ಇಂಥ ಜಮೀನುಗಳ ಸಂಖೆ ಹೆಚ್ಚುತ್ತಿದೆ.

ದೇವರ ಜಮೀನಿನಲ್ಲಿ ಬೇಸಾಯ ನಡೆಯುವವರೆಗೂ ಗುತ್ತಿಗೆ, ಕಂದಾಯ ಸರಿಯಾಗಿ ಪಾವತಿಯಾಗುತ್ತಿರುತ್ತವೆ. ಕಾರಣಾಂತರದಿಂದ ಬೇಸಾಯ ನಿಂತರೆ ಗುತ್ತಿಗೆ, ಕಂದಾಯ ನಿಂತಂತೆ. ದೇವರು ಮಾತನಾಡುವುದಿಲ್ಲ; ತಿರುಗಾಡುವುದಿಲ್ಲ; ಆದ್ದರಿಂದ ದೇವರ ಜಮೀನು ಬೀಳು ಬಿದ್ದರೆ ರೂಢಿಸಲು ಯಾರು ಬರುವುದಿಲ್ಲ; ಕೇಳಲು ದಿಕ್ಕಿರುವುದಿಲ್ಲ. ಸರಕಾರಿ ಕಂದಾಯ ಹಾಗಲ್ಲ, ಅದರ ಹತ್ತಿರ ಸಿಬ್ಬಂದಿ ಇದೆ; ಸೇನೆ ಇದೆ; ಕೋರ್ಟು ಕಛೇರಿಗಳಿವೆ. ಮೂಲೆ ಮೂಲೆ ತಿರುಗಾಡಲು ಸರಕಾರಕ್ಕೆ ಶಕ್ತಿಯಿದೆ. ಬೇಸಾಯವಾಗಿರಲಿ, ಬೀಳು ಬಿದ್ದಿರಲಿ; ಸರಕಾರಕ್ಕೆ ಕಂದಾಯ ಬೇಕು. ಬೇಸಾಯದ ಭೂಮಿಯನ್ನು ಬೀಳು ಬಿಟ್ಟುಕೊಂಡು ವರ್ಷಗಟ್ಲೆ ಕಂದಾಯ ಕಟ್ಟುತ್ತಿರಿ, ನಿಮ್ಮನ್ನು ಕೇಳುವರಿಲ್ಲ. ಅಣ್ಣೆಮಕ್ಕೆ ಜಮೀನು ಬಂಜರು ಬಿದ್ದುದರಿಂದ ಎರಡು ವರ್ಷ ಕಂದಾಯ ಬಾಕಿನಿಂತಿತು.

ಕಂದಾಯ ಬಾಕಿಯಾದ್ದರಿಂದ ಸರಕಾರದಿಂದ ಕಾಗದವೊಂದು ಬಂತು ಅಣ್ಣೇಗುಡ್ಡೆ ದೇವಸ್ಥಾನ ಪಾರುಪತ್ಯೆಗಾರರು ಆ ಕಾಗದವನ್ನು ಅಣ್ಣೇಮಕ್ಕಿ ಯವರಿಗೆ ತಲಪಿಸುವಂತೆ ಹೇಳಿದರು. ಕಂದಾಯ ಬಾಕಿಗೆ ಹುಟ್ಟಿದ ನೋಟೀಸನ್ನು ನೋಡಿ ಸುಬ್ಬಯ್ಯಗೌಡ ಹೇಳಿದ, ನಂಬಿಕೆಯ ಕ್ರಯಪತ್ರದ ಗಲಾಟೆಯಲ್ಲಿ ಈ ಜಮೀನು ಕೊಳ್ಳುವ ದುಡ್ಡನ್ನು ಛಾಪಾ ಕಾಗದಕ್ಕೆ ಸುರಿದು ಸುಸ್ತಾಗಿ ಹೋದೆವು. ಎರಡು ವರ್ಷದ ಕಂದಾಯ ಬಾಕಿಯಾದ ಕೂಡಲೇ ನೋಟೀಸ್ ಬಂತು."

"ಹೋದ ವರುಷವೇ ನೋಟೀಸ್ ಹುಟ್ಟಬೇಕಿತ್ತು. ಅಮಲ್ದಾರರು ಬಹಳ ಈಶ್ವರ ಭಕ್ತರಂತೆ. ದೇವರ ಖಾತೆಯೆಂದು ಕಳೆದ ವರ್ಷ ಬಿಟ್ಟಿರ ಬೇಕು" ಎಂದ ಗುರಪ್ಪಗೌಡ.

ಮುಂಗಾರುಮಳೆ ಸಮಯ ಗುರಪ್ಪಗೌಡನ ಮಗ ಕಾಯಿಲೆ ಬಿದ್ದ ಚಿಕಿತ್ಸೆಗೋಸ್ಕರ ಅವನನ್ನು ಕರೆದುಕೊಂಡು ಗುರಪ್ಪಗೌಡ ಹೆಂಡತಿ ಯೊಂದಿಗೆ ಆಸ್ಪತ್ರೆಗೆ ಹೋದ. ಮಗನಿಗೆ ವಾಸಿಯಾಗಲು ತಿಂಗಳುಹಿಡಿ ಯಿತು. ಇಷ್ಟರಲ್ಲಿ ಬೇಸಾಯ ಪ್ರಾರಂಭವಾಯಿತು. ಆಸ್ಪತ್ರೆಯಿಂದ ನೆಟ್ಟಗೆ ಕೆರೆ ತೋಟಕ್ಕೆ ಹೋಗಿ ಅಲ್ಲಿಯೇ ನಾಗಮ್ಮ, ಗುರಪ್ಪಗೌಡ ನೆಲಸಿದರು.

## ಹನ್ನೊಂದು

ಗುರಪ್ಪಗೌಡನನ್ನು ಹೊರಡಿಸಿ ತಾನೇ ಮನೆ, ಜಮೀನನ್ನೆಲ್ಲವನ್ನೂ ಆಕ್ರಮಿಸಿಕೊಳ್ಳುವ ದುರಾಶೆ, ದೂರಾಲೋಚನೆ ಒಂದಾನೊಂದು ಕಾಲದಲ್ಲಿ ಸುಬ್ಬಯ್ಯಗೌಡನಿಗಿತ್ತು. ಸುಬ್ಬಯ್ಯಗೌಡ, ತಾನು ಯೋಚಿಸಿದ್ದನ್ನು ತನ್ನ ಕಣ್ಣಮುಂದೆ ನೋಡಿದ. ಈ ಭಾಗ್ಯವನ್ನು ಎಷ್ಟುಮಂದಿ ಪಡೆದುಕೊಂಡು ಬಂದಿರುತ್ತಾರೆ?

ಅಣ್ಣೇಮಕ್ಕಿ ಜಮೀನೆಲ್ಲವನ್ನೂ ತಾನೊಬ್ಬನೇ ಹೊಂದಬೇಕೆಂಬ ದುರಾಲೋಚನೆಯಲ್ಲಿದ್ದಂತೆ ಮಕ್ಕಳು ನೇಗಿಲಮೇಣಿ ಹಿಡಿಯುವ ಹಾಗಾ ಗುವ ವರೆಗೂ ಗುರಪ್ಪಗೌಡನನ್ನು ತನ್ನ ಕೈಯಲ್ಲಿಟ್ಟುಕೊಂಡಿರಬೇಕೆಂದು ಸುಬ್ಬಯ್ಯಗೌಡ ಬಹಳ ಪ್ರಯತ್ನಪಟ್ಟ. ಮಧ್ಯೆ ಬಂದೊದಗಿದ ಎಡರು ಗಳಿಂದ ಅದು ಕೊನೆಯ ವರೆಗೂ ಕನಸಾಗುಳಿಯಿತು. ಒಂದು ಲಭಿಸಿತು,

ಮತ್ತೊಂಮ ತೊಲಗಿತು. ಗುರಪ್ಪಗೌಡ ಆಸ್ಪತ್ರೆಯಿಂದ ಕೆರೆ ತೋಟಕ್ಕೆ ಹೋಗಿ ನೆಲಸಿದ ಸಮಾಚಾರ ಕೇಳಿ ಸುಬ್ಬಯ್ಯಗೌಡ ಮಂಕನಂತೆ ದಿನವೆಲ್ಲ ಮನೆಯಲ್ಲಿಯೇ ಕುಳಿತು ಕಳೆದ.

ಶತ್ರು ಪ್ರತ್ಯಕ್ಷವಿದ್ದಾಗ ಮನುಷ್ಯ ಉತ್ಸಾಹ, ಎಚ್ಚರಿಕೆ, ದೂರಾಲೋಚನೆಯಿಂದಿರುತ್ತಾನೆ; ಅವನಿಲ್ಲದಿದ್ದರೆ ವಿಚಾರವಿಹೀನನಂತೆ ಸೋಮಾರಿಯಾಗುತ್ತಾನೆ.

ಗುರಪ್ಪಗೌಡ ಮನೆ ಬಿಟ್ಟಿದ್ದರಿಂದ ಸುಬ್ಬಯ್ಯಗೌಡನ ಮನಸ್ಸಿನಲ್ಲಿ ಹರ್ಷವಿಷಾದಗಳಿರಲು, ಮಂಕು ಕವಿದಂತಿತ್ತು. ಜಮೀನು ಮನೆ ತನಗಾಯಿತೆನ್ನುವುದಕ್ಕೆ ಎಲ್ಲಾ ಅಣ್ಣೇಗುಡ್ಡೆ ದೇವರ ಹೆಸರಿನಲ್ಲಿದೆ. ಭೋಗಿಸುವ ಅಧಿಕಾರ ತನ್ನೊಬ್ಬನಿಗಿಲ್ಲ, ತಮ್ಮನ ಭಾಗದ ಜಮೀನನ್ನು ಬಿಟ್ಟು ತನ್ನ ಭಾಗವನ್ನು ರೂಢಿಸೋಣವೆಂದರೆ ಆಗಲೇ ಪಾಳುಬಿದ್ದಿರುವುದಲ್ಲದೆ ಗುರಪ್ಪಗೌಡ ತನ್ನ ಭಾಗದ ಜಮೀನನ್ನು ಪಾಳುಬೀಳಿಸಿ ಕೊಂಡಿರುವನೇ ವಿನಾ ಬೇಸಾಯ ಮಾಡುವುದಕ್ಕೆ ಬಿಡುವುದಿಲ್ಲ. ಅಂಥ ಊರಿನಲ್ಲಿ ಜೀವಿಸಿ ತಾನೇ ಬರುವ ಪುರುಷಾರ್ಥವೇನು? ಎಂದು ಮುಂತಾಗಿ ಯೋಚಿಸುವುದರಲ್ಲಿಯೇ ಒಂದುವಾರ ಕಳೆದ. ನೆರೆಯೂರಿನಲ್ಲಿ ಸುಬ್ಬಯ್ಯಗೌಡನೂ ಗುತ್ತಿಗೆಗೆ ಜಮೀನು ರೂಢಿಸಿಕೊಂಡಿದ್ದ. ಗುರಪ್ಪಗೌಡ ಮನೆಯಲ್ಲಿದ್ದು ಕೊಂಡು ಕೆರೆ ತೋಟದಲ್ಲಿ ಜಮೀನು ರೂಢಿಸುತಿದ್ದುದರಿಂದ ಸುಬ್ಬಯ್ಯಗೌಡನೂ ಹಾಗೆ ಮಾಡುತ್ತಿದ್ದ. ತನ್ನ ಪ್ರತಿಸ್ಪರ್ಧಿ ಇಲ್ಲದೆ ಮೇಲೆ ತಾನಿದ್ದು ಪ್ರಯೋಜನವೆನೆಂದೂ ತಾವು ಹೋದ ಮೇಲೆ ಜಮೀನಿನ ಸ್ಥಿತಿ ಏನಾಗುವುದೆಂದೂ ಇಲ್ಲಿಂದ ಹೋಗಿ ಬೇಸಾಯಮಾಡುವುದು ಹೆಚ್ಚು ಪ್ರಯಾಸವಾಗಿದ್ದುದರಿಂದಲೂ ಹೆಂಡತಿ, ಮಕ್ಕಳೊಂದಿಗೆ ಒಂದು ದಿನ ಸುಬ್ಬಯ್ಯಗೌಡನೂ ತಾನು ಗುತ್ತಿಗೆಗೆ ರೂಢಿಸಿಕೊಂಡಿದ್ದ ಹಳ್ಳಿಗೆ ಹೋಗಿ ನೆಲಸಿದ.

ಸಹೋದರರ ದುಡಿಮೆ. ಜೀವನ ಬೇರೆ ಬೇರೆ ಊರಿನಲ್ಲಿ ನಡೆಯುತ್ತಿದ್ದರೂ ತಮ್ಮ ಜಮೀನಿನ ಯೋಚನೆ, ರಕ್ಷಣೆಯ ಚಿಂತೆ ಕಡಮೆಯಾಗಲಿಲ್ಲ. ಅಲ್ಲಿಯ ಸ್ಥಿತಿಗತಿಗಳನ್ನು ವಿಚಾರಿಸಿಕೊಳ್ಳುತಿದ್ದರು.

ಸಹೋದರರಿಬ್ಬರು ಅಣ್ಣೇಮುಕ್ಕಿ ಬಿಡುವಾಗ ಎರಡು ವರ್ಷದ ಕಂದಾಯ ಬಾಕಿಯಿತ್ತು. ಆ ಕಂದಾಯ ಬಾಕಿಗೆ ಕಾಗದಗಳ ಮೇಲೆ ಕಾಗದ ಬರುತಿದ್ದವು. ಇವರು ಊರು ಬಿಟ್ಟಮೇಲೂ ಕಾಗದ ಬರುವುದು ತಪ್ಪಲಿಲ್ಲ. ಅವುಗಳನ್ನು ತೆಗೆದುಕೊಳ್ಳುವವರೂ ಇರಲಿಲ್ಲ. ಹಾಳುಮನೆ; ಬೀಳು ಜಮೀನು ಕಾಗದ ಪತ್ರಗಳಿಂದ ಪ್ರಯೋಜನವಾಗದಿರಲು ಹ್ಯಾಟು, ಜರಿ, ಕೆಂಪು, ಕರಿ ಪೇಟಾಗಳು ಒಂದು ದಿನ ಆ ಹಾಳೂರಿನಲ್ಲಿ ಕಾಣಿಸಿದವು. ಕಂದಾಯ ವಸೂಲಿಗೆ ಸಬ್‌ಡಿವಿಜನ್ ಸಾಹೇಬರೂ ಅಮಲ್ದಾರರೂ ಬಂದಿರುವರೆಂದು ತಿಳಿದ ಮೇಲೆ ಅಕ್ಕಪಕ್ಕದ ಹಳ್ಳಿಗಳಿಂದ ಜನರು ಬಂದಿದರು. ಸ್ಥಳಕ್ಕೆ ಬಂದ ಮೇಲೆ ಪಟೇಲ, ಶ್ಯಾನುಭೋಗರ ರಿಪೋರ್ಟು ನಿಜವೆಂದು ಸಬ್‌ಡಿವಿಜನ್ ಸಾಹೇಬರಿಗೂ ಅಮಲ್ದಾರರಿಗೂ ಮಂದಟ್ಟಾಯಿತು. ಮುಂದಿನ ಕ್ರಮ ಜರುಗಿಸಬೇಕಾಯಿತು. ಆ ಜಮೀನು ಅಣ್ಣೇಗುಡ್ಡೆ ದೇವರ ಹೆಸರಿಗೆ ಕ್ರಯಪತ್ರವಾದ್ದರಿಂದ ಆ ದೇವಸ್ಥಾನದ ಪಾರುಪತ್ತೆಗಾರರ ಹತ್ತಿರ ಜನ ಹೋಯಿತು. ಗ್ರಾಮಸ್ಥರ ಸಾಕ್ಷಿಗೋಸ್ಕರ ತಮ್ಮನ್ನು ಕರೆಯಿಸಿರಬೇಕೆಂದುಕೊಂಡು ಅವರು ಬಂದು ಕೈಮುಗಿದು ನಿಂತುಕೊಂಡರು. ಸಬ್ ಡಿವಿಜನ್ ಸಾಹೇಬರೇ ಮೊದಲು ಅವರನ್ನು ಮಾತನಾಡಿಸಿದವರು. ಅವರು ಕೇಳಿದರು, "ನಿಮ್ಮ ದೇವಸ್ಥಾನದ ಮುಂದೆಯೇ ನಿಮ್ಮ ಜಮೀನಿದೆ, ಆದರೂ ಹಾಳು ಕೆಡವಿದ್ದೀರಿ. ನೀವುಂಟು ನಿಮ್ಮ ಜಮೀನುಂಟು, ಅದರ ವಿಚಾರ ನಮಗೆ ಬೇಡ. ಸರಕಾರಿ ಕಂದಾಯವನ್ನೇಕೆ ಬಾಕಿಯಿಟ್ಟುಕೊಂಡಿರುವಿರಿ?"

ಮಧ್ಯೆ ಅಮಲ್ದಾರರು ಹೇಳಿದರು, "ಕಂದಾಯ ಕಟ್ಟುವ ಮಾತು ಹಾಗಿರಲಿ, ಇಷ್ಟು ನೋಟೀಸುಗಳಿಗೊಂದಕ್ಕೂ ಉತ್ತರವನ್ನೇಕೆ ಕೊಡಲಿಲ್ಲ? ಕಛೇರಿಗೆ ರೂಬರೂಬು ಹಾಜರೂ ಆಗಲಿಲ್ಲ! ನಮ್ಮ ಕೆಲಸಕಾರ್ಯಗಳನ್ನೆಲ್ಲ ಹಾಳುಮಾಡಿಕೊಂಡು ಕಂದಾಯ ವಸೂಲಿಗೆ ಬರಬೇಕಾಯಿತು."

ಸಾಕ್ಷಿಗೋಸ್ಕರ ಕರೆಯಿಸಬೇಕೆಂಬ ಯೋಚನೆಯಿಂದ ಬಂದ ಪಾರುಪತ್ತೆಗಾರರಿಗೆ ಸಬ್‌ಡಿವಿಜನ್ ಸಾಹೇಬರು, ಅಮಲ್ದಾರರು ಅಪರಾಧಿಸ್ಥಾನದಲ್ಲಿ ನಿಲ್ಲಿಸಿ ಪ್ರಶ್ನೆ ಕೇಳುತಿರುವುದನ್ನು ನೋಡಿ ಮೊದಲು ಅವರು ಭಯಗೊಂಡರು, ತಿರುಗಿ ಧೈರ್ಯತಂದುಕೊಂಡು ಹೇಳಿದರು," ತಾವು

ಅಪ್ಪಣೆಕೊಡಿಸಿರುವುದು ನಿಜ. ದೇವಸ್ಥಾನದ ಪಾರುಪತ್ತೆ ಮತ್ತು ಪೂಜೆ ಗಳೆರಡನ್ನೂ ನಾನೊಬ್ಬನೇ ಮಾಡಬೇಕಾಗಿರುವುದರಿಂದ ಯೋಚಿಸಲೂ ಅವಕಾಶವಿರುವುದರಿಂದ ಯೋಚಿಸಲೂ ಅವಕಾಶವಿರುವುದಿಲ್ಲ. ಇನ್ನು ಸರಕಾರಿ ಕಂದಾಯ ಕಟ್ಟುವ ವಿಚಾರ; ಅದು ದೇವರ ಕಾರ್ಯ, ಯಾರೊ ಬ್ಬರು ನಿರ್ವಹಿಸುವ ಕೆಲಸವಲ್ಲ. ದೇವರ ಸೇವೆ ಅಖಂಡವಾಗಿ ನಡೆಯು ತಿರಬೇಕೆಂಬುದೇ ಭಕ್ತಾದಿಗಳ ಸಂಕಲ್ಪ. ಆದ್ದರಿಂದ ಭಕ್ತಾದಿಗಳು ದೇವರ ಹೆಸರಿನಲ್ಲಿ ಅನೇಕ ರೀತಿಯಲ್ಲಿ ಸೇವೆ ಸಲ್ಲಿಸುತಿರುತ್ತಾರೆ. ಸೇವೆ ಸ್ವೀಕರಿಸು ವುದು ದೇವರ ಕಾರ್ಯ; ಯಾರಾದರು ಸೇವೆ ಸಲ್ಲಿಸದಿದ್ದರೆ ಏಕೆ ಸಲ್ಲಿಸಲಿಲ್ಲ ವೆಂದು ಕೇಳುವುದಿಲ್ಲ. ತಾವು ತಿಳಿದವರು, ಓದಿದವರು, ನಾಲ್ಕಾರು ಕಡೆ ತಿರುಗಿ ಅಧಿಕಾರ ಮಾಡುವವರು. ಎಲ್ಲಿಯಾದರೂ ದೇವರು ಕೇಳುವುದಕ್ಕೆ ಹೋಗುವುದೆ? ಅದು ಭಕ್ತಾದಿಗಳ ಕೆಲಸ. ಮುಖ್ಯವಾಗಿ ದೇವರ ಸೇವೆ ಅಖಂಡವಾಗಿ ನಡೆದುಕೊಂಡು ಬರಬೇಕು. ಅನ್ನು ನಮಗೂ ಕಂದಾಯಕ್ಕೂ ಸಂಬಂಧವಿಲ್ಲ."

ಪಾರುಪತ್ತೆಗಾರರ ಮಾತು ಕೇಳಿ ನೆರೆದವರಿಗೆಲ್ಲಾ ಆಶ್ಚರ್ಯವಾಯಿತು. ಅಮಲ್ದಾರರು ಕೇಳಿದರು, "ಹಾಗಾದರೆ ಇದು ದೇವರ ಜಮೀನಲ್ಲವೇ"

ಪಾರುಪತ್ತೆಗಾರರಿಗೆ ಈ ಸಾರಿ ನಗುಬಂತು. ಅವರ ನಗುವಿಗೆ ಕಾರಣ ಒಬ್ಬರಿಗೂ ಗೊತ್ತಾಗಲಿಲ್ಲ. ಅವರು ಹೇಳಿದರು, ದೇವರ, ಸರ ಕಾರದ ಜಮೀನು ಯಾವುದಲ್ಲ ಸ್ವಾಮಿ! ಅವರಿಲ್ಲದೆ ಬದುಕುವುದು ಸಾಧ್ಯವೇ? ಪಾತ್ರಭೇದದಿಂದ ದೊಡ್ಡವರು, ಚಿಕ್ಕವರು; ಹಿರಿಯವರು, ಕಿರಿಯವರೆಂಬ ವ್ಯತ್ಯಾಸ ವ್ಯವಹಾರದಲ್ಲಿರುವಂತೆ ಸ್ಥಾನಾ ಭೇದದಿಂದ ಲೌಕೀಕರಲ್ಲಿ ಇಂಥಾವರ ಜಮೀನೆಂದು ಕರೆಯುವುದು ರೂಢಿ. ಇದು ಅಣ್ಣೀಮಕ್ಕಿಯವರ ಜಮೀನು. ಅವರು ತುಂಬಾ ಪುಣ್ಯವಂತರು; ಧರ್ಮಾತ್ಮರು. ತಂಪುಹೊತ್ತಿನಲ್ಲಿ ಆ ಮನೆತನದವರ ಹೆಸರನ್ನು ನೆನಸಬೇಕು ಸ್ವಾಮಿ! ಅಣ್ಣೀಮಕ್ಕಿ ನಾಗೇಗೌಡರೆಂದರೆ ದೇವರಂಥ ಮನುಷ್ಯ. ಸುಬ್ಬಯ್ಯ ಗೌಡ, ಗುರ್ಪ್ಪಗೌಡ ಅತನಿಗೆ ಸರಿಸಮಾನರಾದ ಮಕ್ಕಳು. ದೇವರೆಂದರೆ ತುಂಬಾ ಭಯಭಕ್ತಿ. ತಮ್ಮ ಆಸ್ತಿಯನ್ನೆಲ್ಲಾ ದೇವರ ಹೆಸರಿನಲ್ಲಿ ಕ್ರಯಕ್ಕೆ ಬರೆದು ಹಾಕಿದರು. ದೇವರ ಸೇವೆಗೆ ತಾವೇ ಒಪ್ಪಿಸಿದ ಆಸ್ತಿ. ದೇವರಿಲ್ಲಿ

ಯಾದರೂ ಆಸ್ತಿ ಮಾಡಲು ಹೋಗುವುದೆ! ಆಸ್ತಿಕ ಮಹಾಜನರು ಸೇವೆ ಗೋಸ್ಕರ ಅರ್ಪಿಸುತ್ತಾರೆ. ಹರಿಶ್ಚಂದ್ರನಂತ ರಾಜನಿಗೆ ವಿಪತ್ತುಗಳು ಬಂದೊದಗಿದವು; ಶ್ರೀರಾಮನಿಗೆ ವನವಾಸ ಪ್ರಾಪ್ತಯಾಯಿತು. ಇನ್ನು ನರಮನುಷ್ಯರ ಪಾಡೇನು? ಅಣ್ಣತಮ್ಮಂದಿರಿಬ್ಬರೂ ತೊಂದರೆಯಲ್ಲಿದ್ದಾರೆ. ಆದ್ದರಿಂದ ಜಮೀನು ಹಾಳು ಬಿದ್ದಿದೆ. ದೇವರ ಸೇವೆಗೆ ಜಮೀನಿನಿಂದ ಸಲ್ಲುವ ಭತ್ತವೂ ನಿಂತು ಹೋಗಿದೆ."

"ಅವರು ಮಾಡದೆ ಹೋದರೆ ಬೇರೆಯವರಿಂದ ವ್ಯವಸಾಯ ಮಾಡಿಸಿ. ಅದರಿಂದ ಸರಕಾರಕ್ಕೆ ಕಂದಾಯ ಸರಿಯಾಗಿ ಪಾವತಿಯಾಗುತ್ತದೆ. ದೇವರ ಸೇವೆಯೂ ಸರಾಗವಾಗಿ ನಡೆಯುತ್ತದೆ" ಎಂದು ಅಮಲ್ದಾರರು ಸಲಹೆ ಕೊಟ್ಟರು.

"ದೇವರೂ ಲೌಕಿಕ್ಕಳಿದರೆ ಪ್ರಪಂಚದಲ್ಲಿ ಧರ್ಮ, ಕರ್ಮ ಉಳಿಯ ಬೇಕಲ್ಲ ಸ್ವಾಮಿ; ಸೇವೆಯನ್ನು ಸ್ವೀಕರಿಸಿ, ಭಕ್ತಾದಿಗಳಿಗೆ ಪ್ರಸಾದ ವಿನಿಯೋಗಿಸುವುದು ದೇವರ ಧರ್ಮ" ಎಂದರು ಪಾರುಪತ್ತೆಗಾರರು.

"ಜಮೀನು ದೇವರ ಹೆಸರಿನಲ್ಲಿದೆ; ಕಂದಾಯ ನೀವೇ ಕಟ್ಟಬೇಕಾಗುವುದು, ಇಲ್ಲದಿದ್ದರೆ ಜಮೀನು ಕಂದಾಯ ಬಾಕಿಗೆ ಹರಾಜು ಮಾಡಲಾಗುವುದು." ಎಂದು ಸಬ್ ಡಿವಿಜನ್ ಸಾಹೇಬರು ಅಪ್ಪಣೆ ಕೊಡಿಸಿದರು.

ಸಬ್ ಡಿವಿಜನ್ ಸಾಹೇಬರ ಅಧಿಕಾರ ವಾಣಿಗಿಂತ ಹೆಚ್ಚು ಆಶ್ಚರ್ಯದಿಂದ ಪಾರುಪತ್ತೆಗಾರರು ಹೇಳಿದರು, "ದೇವರ ಗಂಟು, ಸರಕಾರದ ಗಂಟು ಎಲ್ಲಿಗೂ ಹೋಗುವುದಿಲ್ಲ. ಸರಕಾರ ಕರ್ತವ್ಯ ಹೇಗೆ ಕಂದಾಯ ವಸೂಲು ಮಾಡುವುದೋ ಹಾಗೆ ದೇವರ ಕಾರ್ಯ ಭಕ್ತಾದಿಗಳಿಂದ ಕೇವಲ ಸೇವೆ ಸ್ವೀಕಾರ ಮಾಡುವುದು. ಉತ್ತಿ, ಬಿತ್ತಿ ಕಂದಾಯ ಕಟ್ಟುವುದು ಪ್ರಜೆಗಳ ಕೆಲಸ, ಸರಕಾರಕ್ಕೆ ಆ ಕೆಲಸ ಮಾಡಲು ಸಾಧ್ಯವೇ? ಹಾಗೆ ದೇವರ ಕಾರ್ಯ. ಬೇಸಾಯ ಮಾಡುವವರು ಕಂದಾಯ ಕಟ್ಟಬೇಕು. ಕಾಣಿಕೆ ದುಡ್ಡನ್ನು ಕಂದಾಯ ಕಟ್ಟೋಣವೇ? ಬೇಸಾಯ ಮಾಡುವವರೆ ಅನಿವಾರ್ಯ ನಿಮಿತ್ತ ಹಾಳು ಕೆಡವಿರುವಾಗ ಯಾರಾದರೇನು ಮಾಡಲು ಸಾಧ್ಯ? ದೇವರೇ ಸರಕಾರ; ಸರಕಾರವೇ ದೇವರು. ಇವರಿಗೆ ಮೀರಿದ ವಸ್ತು ವೇನಿದೆ? ಸರಕಾರ, ದೇವರ ಕಾರ್ಯ ಅಖಂಡವಾಗಿ ನಡೆಯುತ್ತಿರಬೇಕು."

“ನೀವು ಹೇಳುತ್ತಿರುವುದೆಲ್ಲ ನಿಜ. ದೇವರ ಸೇವೆ ನಡೆಯುವಂತೆ ಸರಕಾರವೂ ನಡೆಯಬೇಕು. ಕಂದಾಯ ಬಂದರೇ ಸರಕಾರದ ಕೆಲಸ. ಜಮೀನು ಯಾರ ಹೆಸರಿನಲ್ಲಿದೆಯೋ ಅವರೇ ಕಂದಾಯ ಕಟ್ಟಬೇಕೆಂಬುದು ಸರಕಾರದ ಕಾನೂನು. ನಮಗೆ ಗೊತ್ತಾಗುತ್ತಿದೆ, ಯಾವುದಾದರೊಂದು ರೀತಿಯಲ್ಲಿ ತೀರ್ಮಾನ ಮಾಡಿ. ಸರಕಾರಕ್ಕೆ ಯಾರು ಕಟ್ಟಿದರು ಸರಿಯೆ, ಈ ಖಾತೆಗೆ ಹಣ ಜಮವಾದರೆ ಸರಿ” ಎಂದು ಅಮಲ್ದಾರರು ಹೇಳಿದರು.

ಅತ್ಯಂತ ಸಂಕೋಚದಿಂದ ಪಾರುಪತ್ತೆಗಾರರು ಹೇಳಿದರು, “ಮಾತು ಕತೆಯಲ್ಲಿಯೇ ಸಮಯ ವ್ಯರ್ಥವಾಯಿತು. ಶಂಕರಪ್ಪ ನೀನು ಹೋಗಿ ನಮ್ಮ ಮಾಣಿ ಹತ್ತಿರ ಕಾಫಿ ಉಪ್ಪಿಟ್ಟು ತಕ್ಷಣವೇ ಮಾಡುವಂತೆ ಹೇಳು ತುಂಬಾ ಹೊತ್ತಾಗಿ ಹೋಯಿತು.”

ಅಮಲ್ದಾರರು ಸಬ್ ಡಿವಿಜನ್ ಸಾಹೇಬರ ಕಡೆಗೆ ತಿರುಗಿ ಪಾರು ಪತ್ತೆಗಾರ ಹೇಳಿದರು, “ಮಧ್ಯಾಹ್ನವಾಗುತ್ತಾ ಬಂತು. ಊಟವನ್ನು ಇಲ್ಲಿಯೇ ಮುಗಿಸಿಕೊಂಡು ಮುಂದೆ ಪ್ರಯಾಣ ಬೆಳೆಸೋಣವಾಗಲಿ.”

ಸಬ್ ಡಿವಿಜನ್ ಸಾಹೇಬರನ್ನು ನೋಡಿ ಅಮಲ್ದಾರರು ಕೇಳಿದರು, ಹೇಳಿ, ಏನು ಮಾಡೋಣ; ಹೋಗಲು ಹೊತ್ತಾಗಬಹುದು.

“ಕೆಲಸ ಮುಗಿಸಿಕೊಂಡು ಹೊರಡೋಣ. ಊಟಕ್ಕೆ ನಿಂತರೆ ಸಾಯಂಕಾಲವಾಗುವುದು. ಕಾಫಿ, ತಿಂಡಿ ಸಿಕ್ಕರೆ ಸಾಕು” ಎಂದು ಸಬ್ ಡಿವಿಜನ್ ಸಾಹೇಬರು ಹೇಳಿದರು.

ಕಾಫಿ, ತಿಂಡಿಯ ವ್ಯವಸ್ಥೆಗೆ ಜನ ಕಳುಹಿಸಲಾಯಿತು; ಮಾತು ಮುಂದುವರಿಯಿತು. ಸಬ್ ಡಿವಿಜನ್ ಸಾಹೇಬರು ಹೇಳಿದರು, “ಮಾತು ಕಥೆಯಿಂದ ಪ್ರಯೋಜನವಿಲ್ಲ; ಸರಕಾರಕ್ಕೆ ಹಣಬೇಕು. ಯಾವುದಾದ ರೊಂದು ನಿರ್ಣಯಕ್ಕೆ ಬರೋಣ.”

ಅಮಲ್ದಾರರು— ಏನು ಹೇಳಿ! ಹರಾಜಿಗೆ ಇಡೋಣವೇ? ಕಂದಾಯ ಬಾಕಿಗೆ ಜಮೀನು ಹರಾಜಾದರೆ ದೇವಸ್ಥಾನದ ಕೈಯಿಂದ ತಪ್ಪಿ ಹೋಗುತ್ತದೆ.

ಪಾರುಪತ್ತೆಗಾರರು—ಅಣ್ಣೀಮಕ್ಕಿಯವರೇ ಇದುವರೆಗೂ ಕಂದಾಯ ಕಟ್ಟುತ್ತಿದ್ದರು; ಗುತ್ತಿಗೆ ಕೊಡುತ್ತಿದ್ದರು. ಹರಾಜಾದರೆ ಅಣ್ಣೀಮಕ್ಕಿ

ಯವರ ಕೈಯಿಂದ ಜಮೀನು ತಪ್ಪಿ ಹೋಗುವುದೇ ವಿನಾ ದೇವರ ಸೇವೆ ಅಖಂಡವಾಗಿ ನಡೆದುಕೊಂಡು ಬರುತ್ತಿರುತ್ತದೆ.

ಅಮಲ್ದಾರರು—ಹಾಗಾದರೆ ಜಮೀನನ್ನು ಮುಂದಿನ ತಿಂಗಳು ಹರಾಜಿಗಿಟ್ಟು ಬಿಡೋಣ. ಹರಾಜಿಗೆ ಹಳ್ಳಿಯವರೆಲ್ಲಾ ಬರಲಿ. ಈ ವರ್ಷದ ಕಂದಾಯ ಸೇರಿ ತೊಂಭತ್ತು ರೂಪಾಯಿ ಬಾಕಿಯಾಗುತ್ತದೆ. ಅದು ಸರಕಾರಕ್ಕೆ ಬಂದರೆ ಸರಿ.

ಸಬ್ ಡಿವಿಜನ್—ಸರಿ, ಹಾಗೆ ಮಾಡಿ.

ಪಾರುಪತ್ತೆಗಾರರು—(ಅಲ್ಲಿ ನಿಂತಿರುವ ಹಳ್ಳಿಯ ಜನರನ್ನು ಸಂಬೋದಿಸಿ) ಎಲ್ಲ ಹಳ್ಳಿಯವರಿಗೆ ಹೇಳಿ. ಹೆಚ್ಚು ಜನ ಬಂದರೆ ಜಮೀನು ಹೆಚ್ಚು ಬೆಲೆಗೆ ಹೋಗುತ್ತದೆ. ಕಂದಾಯ ಕಳೆದು ಮಿಕ್ಕ ಹಣವಾದರೂ ದೇವರ ಅಖಂಡ ಸೇವೆಗೆ ಬರಲಿ.

ಅಮಲ್ದಾರರು—ಮುಂದಿನ ತಿಂಗಳಾಗಲಿ ಹರಾಜು.

ಪಾರುಪತ್ತೆಗಾರರು—ಅಷ್ಟಣ್ಣೆ, ಸರಕಾರದ ಹಣಕ್ಕೂ, ದೇವರ ಹಣಕ್ಕೂ ವಿಘ್ನ ಬರಬಾರದು. ಸಾಂಗೋಪಾಂಗವಾಗಿ ಇವರ ಸೇವೆ ನಡೆಯುತ್ತಿರಬೇಕು. ಬೇಸಾಯ ನಡೆಯುವವರೆಗೂ ಗೇಣಿಗುತ್ತಿಗೆ ಸರಿಯಾಗಿ ಬಂತು. ಬೇಸಾಯ ನಿಂತ ತಕ್ಷಣ ಅದೂ ನಿಂತಿತು; ಕಂದಾಯವೂ ನಿಂತಿತು. ಬೇಸಾಯ ನಡೆದರೆ ತಿರುಗಿ ಬರುತ್ತದೆ.

## ಹನ್ನೆರಡು

ಗುರಪ್ಪಗೌಡನಿಗೆ ರಾತ್ರಿ ಎರಡು ಮೂರು ಸಾರಿ ಎಚ್ಚರವಾಯಿತು. ಕೊನೆಯ ಸಾರಿ ಎದ್ದು ಕಿಟಕಿಯಿಂದ ನೋಡಿದ, ಬೆಳಗಿನ ಜಾವದ ಸೂಚನೆಯೇ ಇಲ್ಲ; ಕಿವಿಗೊಟ್ಟು ಕೇಳಿದ, ಕೋಳಿಯ ಕೂಗು ಎಲ್ಲಿಯೂ ಕೇಳಿಸಲಿಲ್ಲ. ಇಂದೇಕೆ ಕೋಳಿ ಕೂಗುವುದನ್ನು ನಿಲ್ಲಿಸಿವೆ ಎಂದುಕೊಂಡು ಎದ್ದವನು ತಿರುಗಿ ಮಲಗದೆ, ಕೋಳಿ ಕೂಗುವುದು ಮರೆತಿರಬಹುದು, ನನಗೆ ಮರೆಯುವುದಕ್ಕಾಗುತ್ತದೆಯೇ ಎಂದು ಬಟ್ಟೆ, ಒರೆತೊಟ್ಟು ಮನೆಯಿಂದ ಹೊರಟ ಬಾಗಿಲನ್ನು ಮುಚ್ಚುತ್ತಾ ನಾಗಮ್ಮ ಕೇಳಿದಳು, " ನಾನು ಎಲ್ಲಿಗಾದರೂ ಹೊರಟಾಗ ನೀನು ಏನಾದರೂ ಹೇಳುವೆ, ಕೆಲಸವಾಗುವುದಿಲ್ಲ

ಎನ್ನುವಿರಿ. ನೀವು ಮಾಡುವುದನ್ನು ನೋಡುತ್ತಾ ಸುಮ್ಮನಿರಲು ಮನಸ್ಸು ಬರುವುದಿಲ್ಲ. ಇನ್ನೂ, ಇಷ್ಟು ರಾತ್ರಿ ಇದೆ ಒಬ್ಬರೇ ಎಲ್ಲಿಗೋ ಹೊರಟಿರುವಿರಿ."

"ನೀನು ಜೊತೆ ಬಾ ಇಬ್ಬರಾಗುತ್ತೇವೆ."

"ಹಾಗಿದ್ದರೆ ಹೀಗೆಲ್ಲ ಆಗುತ್ತಿತ್ತೇ."

"ಜೊತೆಯಲ್ಲಿ ಹುಟ್ಟಿದ ಅಣ್ಣನೇ ಮಧ್ಯ ಹೊಳೆಯಲ್ಲಿ ಕೈಬಿಟ್ಟಿರುವಾಗ ಈ ಪ್ರಪಂಚದಲ್ಲಿ ಇನ್ನು ಜೊತೆ ಬರುವವರು ಯಾರು? ಮನುಷ್ಯ ಹುಟ್ಟುವುದು ಒಂಟಿಯಾಗಿ, ಜೀವಿಸುವುದು ಒಂಟಿಯಾಗಿ, ಸಾಯುವುದು ಒಂಟಿಯಾಗಿ ಇನ್ನು ಜೊತೆ, ಹೆಂಡತಿ, ಮಕ್ಕಳು ಮರಿ ಎಂದುಕೊಳ್ಳುವುದು ಬರಿ ಆಟ. ಬಾಗಿಲನ್ನು ಹಾಕಿಕೊ, ಬೇಗ ಬರುತ್ತೇನೆ" ಎಂದು ಹೇಳುತ್ತಾ ಗುರಪ್ಪಗೌಡ ಅಕ್ಕಪಕ್ಕಕ್ಕೆ ತಿರುಗದೆ ಮುಂದಕ್ಕೆ ಕಾಲುಬೀಸಿ ಹಾಕಿದ. ಅವನು ಕತ್ತಲೆಯಲ್ಲಿ ಅದೃಶ್ಯವಾಗುವ ವರೆಗೂ ನಾಗಮ್ಮ ಬಾಗಿಲನ್ನು ಹಿಡಿದುಕೊಂಡು ನೋಡುತ್ತಿದ್ದಳು.

ಗುರಪ್ಪಗೌಡ ಅಣ್ಣೇಮಕ್ಕಿ ಗಡಿಯ ಹತ್ತಿರ ಬಂದಾಗ ಮೊದಲನೆಯ ಸಾರಿ ಕೋಳಿ ಕೂಗು ಕೇಳಿಸಿತು, ಬೆಳಕು ಹರಿಯಲು ಇನ್ನು ಬಹಳ ಹೊತ್ತಿದೆಯೆಂದುಕೊಂಡು ನಡೆಯನ್ನು ನಿದಾನಮಾಡಿದ. ಅಣ್ಣೇಮಕ್ಕಿ ಜಮೀನಿನ ಗಡಿಯನ್ನು ದಾಟಿ ನಿಧಾನವಾಗಿ ಹೋಗುತಿರುವಾಗ ಮರದಡಿಯಲ್ಲಿ ಬೆಂಕಿ, ಬೆಂಕಿಯ ಹತ್ತಿರ ಯಾರೋ ಕುಳಿತಿರುವುದು ಕಾಣಿಸಿತು. ಆಗ ಹೆಂಡತಿಯ ಮಾತು ಜ್ಞಾಪಕಕ್ಕೆ ಬಂತು. ಈ ಹಾಳೂರಿನಲ್ಲಿ ಪ್ರೇತದಂತೆ ಕತ್ತಲಿನಲ್ಲಿ ನಾನೊಬ್ಬನೇ ಬರುತಿರುವಾಗ ಇಲ್ಲಿ ಮರದಡಿಯಲ್ಲಿ ಬೆಂಕಿ ಹಾಕಿಕೊಂಡು ಕುಳಿತಿರುವವರು ಮನುಷ್ಯರೋ ದೆವ್ವಗಳೋ ಎಂಬ ಭಯದಿಂದ ಗುರಪ್ಪಗೌಡನ ಮನಸ್ಸಿನಲ್ಲಿ ಹುಟ್ಟಿತು. ಭಯದೊಂದಿಗೆ ಅದನ್ನು ನೋಡಬೇಕೆಂಬ ಕುತೂಹಲ. ಮೆಲ್ಲಗೆ ಮರೆಯಲ್ಲಿಯೇ ಬೆಂಕಿಯ ಹತ್ತಿರ ಹೋದ. ಹತ್ತಿರ ತಲಪಿದ ತರುವಾಯ ಮರೆಯಲ್ಲಿ ಮೆಲ್ಲಗೆ ಇಣಿಕಿ ನೋಡಿದ. ಏನು ನೋಡುತ್ತಾನೆ? ನಿಜವಾಗಿಯೂ ಅವನು ಯೋಚಿಸಿದಂತೆ ದೆವ್ವ ಪಿಶಾಚಿಗಳಾಗಿದ್ದರೂ ಅವನಿಗೆ ಅಷ್ಟು ಆಶ್ಚರ್ಯವಾಗುತಿರಲಿಲ್ಲ. ತಾನು ಸ್ವಪ್ನದಲ್ಲಿಯೂ ಯೋಚಿಸಲು ಅಸಾಧ್ಯವಾದ ವಿಚಾರ ಅವನ

ಮುಂದೆ ಪ್ರತ್ಯಕ್ಷವಾಗಿದೆ. ಬಾಯಿಮಾತಾಗಿದ್ದರೆ ಗುರಪ್ಪಗೌಡ ನಂಬುತಿರಲಿಲ್ಲ. ತನ್ನ ಅಣ್ಣ ಸುಬ್ಬಯ್ಯಗೌಡ, ಮಗ ರಂಗಪ್ಪನೊಂದಿಗೆ ಬೆಂಕಿಯ ಬಳಿ ಕುಳಿತಿದ್ದ. ಯಾವನೋ ಯೋಗಿ ತಪಸ್ಸಿಗೆ ಕುಳಿತಿರುವಂತೆ ಕಾಣಿಸಿತು.

ಇವನೇಕೆ ಈ ರಾತ್ರಿ ಇಲ್ಲಿಗೆ ಬಂದು ಕುಳಿತಿರುವನು? ನಾನು ಅವನಿಗೆ ಕಾಣಿಸಿಕೊಳ್ಳಲೇ ಬೇಡವೇ? ಎಂದು ಯೋಚಿಸಿದ. ತನ್ನ ಮಗನನ್ನು ಮನೆಯಿಂದ ಆಸ್ಪತ್ರೆಗೆ ಸೇರಿಸುವುದಕ್ಕೋಸ್ಕರ ಹೋಗುವ ಸಮಯದಲ್ಲಿ ಅಣ್ಣನನ್ನು ನೋಡಿದ್ದ. ಇಷ್ಟು ದಿವಸದ ತರುವಾಯ ಇಂದು ಈ ಕತ್ತಲಲ್ಲಿ ನೋಡಿದ. ಬೆಳಗಾದ ಮೇಲಾದರು ಗೊತ್ತಾಗುವುದರಿಂದ ಮುಂಚೆಯೇ ಕಾಣಿಸಿಕೊಳ್ಳುವುದು ಉತ್ತಮವೆಂದು ಬೆಂಕಿಯ ಬಳಿ ಬಂದ.

ಅಕಸ್ಮಾತಾಗಿ ಗುರಪ್ಪಗೌಡ ಮುಂದೆ ಬಂದುದರಿಂದ ಕದಿಯುವಾಗ ಸಿಕ್ಕಿಬಿದ್ದ ಕಳ್ಳನಂತೆ ಸುಬ್ಬಯ್ಯಗೌಡ ತಬ್ಬಿಬ್ಬಾದ; ಬಾಯಿಯಿಂದ ಮಾತು ಹೊರಡಲಿಲ್ಲ. ಸ್ಮಶಾನಕ್ಕೆ ಸರಿಸಮನಾದ ಈ ಸ್ಥಳದಲ್ಲಿ ಶನಿಹಿಡಿದ ನಾನು ಬಂದಿದ್ದರೆ ಶನಿಯ ನೆರಳಂತೆ ಇವನೂ ಬೆನ್ನು ಹಿಡಿದಿರುವನಲ್ಲ ಎಂದುಕೊಂಡ.

ಅವರ ಮುಂದೆ ಬಂದ ಮೇಲೆ ಗುರಪ್ಪಗೌಡ ಹೇಳಿದ, "ಏನು. ಅಪ್ಪ ಮಗ ಬೆಂಕಿ ಕಾಸುಯಿತ್ತಾ ಈ ರಾತ್ರಿ ಇಲ್ಲಿ ಕುಳಿತಿರುವಿರಿ?"

ತಕ್ಷಣ ಉತ್ತರಕೊಡಲು ಸುಬ್ಬಯ್ಯಗೌಡನಿಗೆ ಬುದ್ಧಿಯೋಡಲಿಲ್ಲಿ. ಅವನ ಪ್ರಶ್ನೆಯನ್ನೇ ಅವನಿಗೆ ತಿರುಗಿಸಿದ, "ನೀನೇನು ಒಬ್ಬನೇ ಈ ರಾತ್ರಿ ಬಂದೆಯಲ್ಲ?"

ಗುರಪ್ಪಗೌಡ ಮೊದಲು ಇವರನ್ನು ನೋಡಿದ್ದರಿಂದ ಅವನ ಮನಸ್ಸು ಭಯ ವಿಸ್ಮಯಗಳಿಂದ ಶಾಂತವಾಗಿತ್ತು; ಯೋಚನೆಗೆ ಅವಕಾಶವಿದ್ದುದರಿಂದ ಹೇಳಿದ, "ನನ್ನದೊಂದು ದನ ತಪ್ಪಿಸಿಕೊಂಡಿದೆ, ಅದನ್ನು ಹುಡುಕುತ್ತಾ ಇಲ್ಲಿಗೆ ಬಂದೆ, ಇಲ್ಲಿ ಹುಲ್ಲು ಚೆನ್ನಾಗಿ ಬೆಳೆದಿರುವುದರಿಂದ ತಪ್ಪಿಸಿಕೊಂಡ ದನಕರು ಇಲ್ಲಿ ಸಿಗುವುದು ಖಂಡಿತ."

ಗುರಪ್ಪಗೌಡನ ಮಾತಿನಿಂದ ಸುಬ್ಬಯ್ಯಗೌಡನ ಭಯ ವಿಸ್ಮಯ ಸಂಪೂರ್ಣ ಮಾಯವಾಗಿ ಅವನಿಗೆ ನಗುಬಂತು. ರಾತ್ರಿಯಲ್ಲಿಯೂ ಹಗಲು

ಸುಳ್ಳು ಎಂದುಕೊಂಡು ಹೇಳಿದ, "ಹಾಗಾದರೆ ಆಗಾಗಾ ನೀನು ಇಲ್ಲಿಗೆ ಬರುತಿರುವೆ? ತಪ್ಪಿದ ಎಲ್ಲರ ಮನೆಯ ದನಕರು ಇಲ್ಲಿಗೆ ಬರುತ್ತವೆಯೋ ಅಥವ ಮನೆಯ ದನಕರು ತಪ್ಪಿದಾಗ ಮಾತ್ರ ಇಲ್ಲಿಗೆ ಬರುತ್ತವೆಯೋ!"

ಗುರಪ್ಪಗೌಡ ಈ ಹಿಂದೆ ಎಂದೂ ಬಂದಿರುರಲಿಲ್ಲ, ಸುಬ್ಬಯ್ಯಗೌಡ ಬರುತಿರುವ ವಿಚಾರ ತಿಳಿಯದು. ಒಂದು ಸುಳ್ಳಿನ ಸಮರ್ಥನೆಗೆ ಮತ್ತೊಂದು ಸುಳ್ಳು, "ಬರಬೇಕೆಂದು ಯಾರೂ ಇಲ್ಲಿಗೆ ಬರುವುದಿಲ್ಲ; ಅಪ್ಪಿ ತಪ್ಪಿ ದನಕರು ಬಂದರೆ ಬರಬೇಕಾಗುತ್ತದೆ."

ಅಪ್ಪಿ, ತಪ್ಪಿ ದನಕರು ಬಂದರೆ ಬರಬೇಕಾಗುತ್ತದೆ. ಅದನ್ನೇ ಮನಸ್ಸಿನಲ್ಲಿ ಎರಡು ಮೂರು ಸಾರಿ ಅಂದುಕೊಂಡು ಸುಬ್ಬಯ್ಯಗೌಡ ಹೇಳಿದ, "ಅಲ್ಲ ಗುರಪ್ಪ ನೀನೆನೋ ಬುದ್ಧಿವಂತ ಅದನ್ನು ನಾನು ಒಪ್ಪಿದೆ; ಎನೊ ದೇವರು ನಿನಗಿಂತ ಮುಂಚೆ ಹುಟ್ಟಿಸಿಬಿಟ್ಟಿದಾನೆ. ತಾಯಿ ಹೊಟ್ಟೆಯಿಂದ ನಾನು ತಂದು ಬಿಟ್ಟಿದ್ದನ್ನು ನೀನು ತಂದೇ ಇಷ್ಟೊಂದು ಚಮತ್ಕಾರದ ಮಾತನಾಡುತಿರುವೆಯಲ್ಲ! ನಿನ್ನಂತೆ ನಾನೂ ದನಕರ ಕಟ್ಟಿದವನು. ಹಗಲೇ ಹಾಳೂರಿಗೆ ಜನ ಬರದಿರುವಾಗ ನೀನು ಮಧ್ಯರಾತ್ರಿ ದನಕರು ಹುಡುಕಿಕೊಂಡು ಬಂದೆ ಎಂದು ಹೇಳುತಿರುವೆಯಲ್ಲ ಯಾರಾದರು ನಂಬುವ ಮಾತೇ ಇದು. ನಮ್ಮ ರಂಗನನ್ನು ಹಿಡಿದುಕೊಂಡು ಅವನ ಹೆಸರಿನಲ್ಲಿ ಆಣೆಮಾಡಿ ಹೇಳುತ್ತೇನೆ, ನೀನು ಈಗ ದನಕರು ಹುಡುಕುತ್ತಾ ಬಂದಿಲ್ಲ. ಎಂದೋ ಬಂದಿದ್ದರೂ ಬಂದಿರಬಹುದು"

ಈ ಮಾತುಕಥೆಯಲ್ಲಿ ಒಬ್ಬರ ಗಮನವೂ ಬೆಂಕಿಯ ಕಡೆಗಿರಲಿಲ್ಲ, ಅದು ನೊಂದಿತ್ತು. ಒಬ್ಬರ ಮುಖ ಒಬ್ಬರಿಗೆ ಕಾಣಿಸದಿದ್ದುದು ಒಳ್ಳೆಯದಾಯಿತು. ಅಲ್ಲಿಯೇ ಕುಳಿತುಕೊಂಡು ಗುರಪ್ಪಗೌಡ ಹೇಳಿದ, "ನೀನು ತಾಯಿಯ ಹೊಟ್ಟೆಯಿಂದ ಎಲ್ಲ ತೆಗೆದುಕೊಂಡು ಮೊದಲು ಹುಟ್ಟಿದವನು. ನೀನೇಕೆ ಬಂದೆ ಮೊದಲು ಹೇಳು?"

"ನಿನ್ನ ದನಕರು ತಪ್ಪಿರುವಂತೆ, ನನ್ನ ದನಕರು ತಪ್ಪುವುದಿಲ್ಲವೇ?

"ಅದು ಮಾತಾಯಿ; ಬಂದ ಕಾರ್ಯವೇನು?"

"ಮಾತು, ಬಂದ ಕಾರ್ಯ ಎರಡು ಒಂದೇ."

"ಅದು ಸುಳ್ಳು."

"ಹಾಗೆ ಬೆಳಗಾದ ಮೇಲೆ ಗೊತ್ತಾಗುವುದು."

ಸಹೋದರರಿಬ್ಬರೂ ಸ್ವಲ್ಪಹೊತ್ತು ಮೌನವಾದರು.

ಬೆಂಕಿಯನ್ನು ಊದಿ ಸುಬ್ಬಯ್ಯಗೌಡ ಹೇಳಿದ, "ಇಂದು ಬೆಳಕು ಬಿಟ್ಟ ಮೇಲೆ ಅಣ್ಣೇಮುಕ್ಕಿ ಜಮೀನೆಲ್ಲ ಕಂದಾಯ ಬಾಕಿಗೆ ಹರಾಜಾಗುತ್ತದೆಂದು ಊರಿಗೆ ತಿಳಿದಿದೆ, ಆ ಮನೆತನದಲ್ಲಿ ಹುಟ್ಟಿ ಬೆಳೆದ ನಮ್ಮಿಬ್ಬರಿಗೂ ಗೊತ್ತಿಲ್ಲ. ಇದಕ್ಕಿಂತ ದೊಡ್ಡ ಸುಳ್ಳಿದೆಯೇ!"

"ಕಂದಾಯಬಾಕಿ ಹರಾಜಿನಲ್ಲಿ ನಿಲ್ಲುವುದಕ್ಕೆ ನೀನು ಬಂದಿರುವೆಯಾ?"

"ನೋಡುವುದಕ್ಕೆ ನಾನು ಬಂದಿದ್ದೇನೆ."

"ನನ್ನನ್ನು ಹಾಗೆ ನೆನಸು."

"ಇಲ್ಲಿ ಮರದಡಿಯಲ್ಲಿ ಕುಳಿತಿರುವುದೇತಕೆ?"

ದೇವರ ಹೆಸರಿಗೆ ಕ್ರಯ ಪತ್ರವಾಗಿದ್ದರೂ ನಮಗೂ ಈ ಜಮೀನಿಗೂ ಇನ್ನು ಸಂಬಂಧವಿದೆ. ಇಂದು ಕಂದಾಯ ಬಾಕಿಗೆ ಹರಾಜಾದ ಮೇಲೆ ನಮ್ಮ ಸಂಬಂಧ ಸಂಪೂರ್ಣವಾಗಿ ತಪ್ಪಿಹೋಗುತ್ತದೆ. ಈ ಕಡೆಗಳಿಗೆಯಲ್ಲಾದರೂ ಒಂದು ರಾತ್ರಿ ಮನೆಯಲ್ಲಿಲ್ಲದಿದ್ದರೆ ಮರದಡಿಯಲ್ಲಾದರೂ ಕಳೆದು ಹೋಗೋಣವೆಂದು ಬಂದೆ. ಬೆಳಗ್ಗೆ ಮುಂಚೆ ಎದ್ದು ಬರಲು ನನ್ನಲ್ಲಿ ಸಾಮರ್ಥ್ಯವಿಲ್ಲ. ಆದ್ದರಿಂದ ರಾತ್ರಿಯೇ ಊಟಮಾಡಿಕೊಂಡು ರಂಗನನ್ನು ಜೊತೆ ಕರೆದುಕೊಂಡು ಬಂದೆ."

"ಇಂದು ಮಧ್ಯಾಹ್ನ ಯಾರದಾಗುತದೆಯೋ, ಅದುವರೆಗಾದರೂ ಇದ್ದು ಹೋಗೋಣ."

## ಹದಿಮೂರು

ಆನಂದ ಮುಖದ ಮೇಲೆ ತುಳುಕುವಂತೆ ಸೂರ್ಯಕಿರಣ ಮೋಡದಂಚಿನಲ್ಲಿ ಮಿರುಗುತಿತ್ತು. ಅಣ್ಣತಮ್ಮಂದಿರಿಬ್ಬರಿಗೂ ತನ್ನ ಮುಖ ತೋರಿಸಬಾರದೆಂಬಂತೆ ಸೂರ್ಯ ಅಣ್ಣೇಗುಡ್ಡದ ಮರೆಯಲ್ಲಿ ಮೇಲೇರುತಿದ್ದ. ಅಣ್ಣೇಮುಕ್ಕಿಯವರ ಮನೆಯ ಮುಂದಿನ ತೆಂಗಿನಮರದ ತುದಿ ಹೊಂಬಣ್ಣಕ್ಕೆ ತಿರುಗಿತು. ನೋಡುತಿರುವಂತೆ ಮರಗಿಡಗಳ ತುದಿಯಲ್ಲಿದ್ದ

ಹೊಂಬಣ್ಣ ಕ್ರಮೇಣ ಮರಗಳ ಮಧ್ಯದಿಂದ ಬುಡದವರೆಗೂ ಬಂದು ಭೂಮಿಯನ್ನೆಲ್ಲ ಆವರಿಸಿತು. ಇಡೀ ಹಳ್ಳಿಗೆ ಚಿನ್ನದ ಮೆರಗು ಕೊಟ್ಟಂತೆ ಹೊಂಬಣ್ಣದಲ್ಲಿ ಮಿಂದು ಕಳಕಳಸಿತು. ಪ್ರಕೃತಿಮಾತೆ ತನ್ನ ಭಂಡಾರವ ನೊಡೆದು ಮಕ್ಕಳ ಮುಂದೆ ಚೆಲ್ಲಿರುವಾಗ ಸುಬ್ಬಯ್ಯಗೌಡ ಸಂಶಯದೃಷ್ಟಿಯಿಂದ ಸುಮ್ಮನೆ ಮುಖದ ಕಡೆ ನೋಡಿದ. ಹೊಂಬಣ್ಣದ ಹೊಳೆಯಲ್ಲಿ ಗುರಪ್ಪಗೌಡ ಮುಳುಗಿದ್ದ; ಮುಖ ಆರಕ್ತವಾಗಿತ್ತು. ಅವನ ಮುಖ ನೋಡಿ ಮನಸ್ಸನ್ನೋದಲಾರದೆ ಕೇಳಿದ, "ಹರಾಜಿನಲ್ಲಿ ನಿಲ್ಲುವುದಕ್ಕೆ ರೂಪಾಯಿ ತೆಗೆದುಕೊಂಡು ಬಂದಿದ್ದೀಯ ಗುರಪ್ಪ ?"

ರೈತರಲ್ಲಿ ಯಜಮಾನಿಕೆ ಮಾಡುವ ಹಿರಿಯ ಮನುಷ್ಯ ಕುಟುಂಬದಲ್ಲಿ ಇತರರಿಗೆ ಗೊತ್ತಿಲ್ಲದ ರೀತಿಯಲ್ಲಿ ನಾಲ್ಕು ಕಾಸನ್ನಾದರೂ ಬಚ್ಚಿಡುವುದು ಯಜಮಾನಿಕೆಯ ಲಕ್ಷಣ. ಯಜಮಾನಿಕೆ ಮಾಡಿ ನಾಲ್ಕು ಕಾಸು ಬಚ್ಚಿಡದಿದ್ದ ಅಣ್ಣ ಹಿರಿಯವನೆಂದು ಹೇಳಿಸಕೊಳ್ಳಲೂ ಅಯೋಗ್ಯ. ತಮ್ಮ ಯಜಮಾನನಾದರೆ ಬಚ್ಚಿಡುವುದಿಲ್ಲವೋ ಎನ್ನಬಹುದು. ತಮ್ಮ ಎಂದೂ ಅಣ್ಣನಾಗುವುದಿಲ್ಲವಾದ್ದರಿಂದ ಯಜಮಾನನಾಗುವುದಿಲ್ಲ. ರೈತರಲ್ಲಿ ಹಿರಿಯವನೆ ಬುದ್ಧಿವಂತನೆಂದು ಹೇಳಿಸಿಕೊಳ್ಳುವುದರಿಂದ ನಾಲ್ಕು ಕಾಸು ಬಚ್ಚಿಡಲು ಅವನೇ ಯೋಗ್ಯನಾಗಿರುತ್ತಾನೆ.

ಸುಬ್ಬಯ್ಯಗೌಡನ ಮಾತು ಕೇಳಿ ಗುರಪ್ಪಗೌಡನ ಹೊಟ್ಟೆ ಚೂರಿಯಿಂದ ತಿವಿದಹಾಗಾಯಿತು. ಕುಡಿಯಲು ಅಂಬಲಿ ಇಲ್ಲದಾಗ ಹೊಡಿಯಲು ಹಚ್ಚಡದ ಚಿಂತೆ! ಯಜಮಾನಿಕೆ ಮಾಡಿದವನು ಅಣ್ಣ; ಇಂಥ ದುರ್ದಿನಕ್ಕೋಸ್ಕರ ಕೈಯಲ್ಲಿ ದುಡ್ಡು ಮಾಡಿಕೊಂಡಿರುವವನು ಅಣ್ಣ. ಹರಾಜಿನಲ್ಲಿ ನಿಲ್ಲುವಿಯೋ ಎಂದು ಕೇಳುವ ಎದೆಗಾರಿಕೆಗೆ ಆಶ್ಚರ್ಯಗೊಂಡು ಹೇಳಿದ, "ಕುಡಿಯುವ ಗಂಜಿಯೇ ಮೃಷ್ಟಾನ್ನವಾಗಿದೆ. ನೀನಾದರು ಯಜಮಾನಿಕೆ ಮಾಡಿದವನು, ಅದನ್ನೆಲ್ಲ ಯೋಚಿಸಬಹುದು ? ನಾನು ಬಂದಿರುವುದು ಕಣ್ಣು ತುಂಬಾ ನೋಡುವುದಕ್ಕೆ."

ತಮ್ಮನ ಮಾತು ಕೇಳಿ ಅಣ್ಣನ ಮನಸ್ಸು ಕುದಿಯಿತು. ಸಹಿಸಲು ಸಾಧ್ಯವಾಗದೆ ಹೇಳಿದ "ನಿನ್ನ ಮನಸ್ಸಿನಲ್ಲಿದ್ದುದು ಇಂದು ಬಾಯಿಗೆ ಬಂತು. ಗಂಟು ಕಟ್ಟಿದ್ದು ನೀನು, ಮಾತು ಹೇಳುವುದು ನನ್ನ ಮೇಲೆ."

"ಇಂದು ಹರಾಜಿನಲ್ಲಿ ಗೊತ್ತಾಗುವುದು ಗಂಟು ಕಟ್ಟಿರುವವರು ಯಾರೆಂದು."

"ಸರಿ"

ಬಿಸಿಲೇರುತ್ತಿತ್ತು; ಅಣ್ಣ ತಮ್ಮಂದಿರು ಮಾತನಾಡುತ್ತಿದ್ದರೂ ಅವರ ಕಣ್ಣು ದಾರಿಯನ್ನು ಕಾಯುತ್ತಿತ್ತು. ಕೊನೆಗೆ ಕಣ್ಣಿನ ನಿರೀಕ್ಷಣೆ ಸಾರ್ಥಕವಾಯಿತು. ಅಮಲ್ದಾರರು, ಪಟೇಲರು, ಶ್ಯಾನುಭೋಗರೆಲ್ಲ ಬಂದಿಳಿದರು. ಅಕ್ಕಪಕ್ಕದ ಹಳ್ಳಿಯವರು ನೆರೆದರು. ಅಣ್ಣೇಗುಡ್ಡೆ ದೇವಸ್ಥಾನದ ಪಾರುಪತ್ತೇಗಾರರು ಕಾಫಿ, ತಿಂಡಿ ಮಾಡಿಸಿಕೊಂಡೇ ಬಂದಿದ್ದರು. ಕಾಫಿ ತಿಂಡಿಯಿಂದ ಕಾರ್ಯಕ್ರಮ ಆರಂಭವಾಯಿತು.

ನೆರೆದಿರುವ ಹಳ್ಳಿಯವರನ್ನು ಸಂಬೋಧಿಸಿ ಅಮಲ್ದಾರರು ಹೇಳಿದರು, "ತೊಂಭತ್ತು ರೂಪಾಯಿ ಕಂದಾಯ ಬಾಕಿ ಇದೆ. ಇದಕ್ಕಿಂತ ಒಂದು ಕಾಸು ಕಡಮೆ ಹರಾಜು ಮಾಡುವಹಾಗಿಲ್ಲ. ತೊಂಭತ್ತು ರೂಪಾಯಿಯ ಮೇಲೆಷ್ಟು ಹಣ ಬಂದರೂ ಅದು ದೇವಸ್ಥಾನಕ್ಕೆ. ಆದ್ದರಿಂದ ಎಷ್ಟು ಹೆಚ್ಚಿಗೆ ಹೋದರೆ ಅಷ್ಟು ದೇವಸ್ಥಾನಕ್ಕೆ. ಸವಾಲನ್ನು ತೊಂಭತ್ತು ರೂಪಾಯಿಯಿಂದ ಪ್ರಾರಂಭಿಸಿ."

ಅಮಲ್ದಾರರ ಮಾತು ಪಾರುಪತ್ತೆಗಾರರಿಗೆ ಒಳ್ಳೇ ಹುರುಪನ್ನು ಹುಟ್ಟಿಸಿತು. ಕಾಫಿ ಕುಡಿದವರು ಆಗತಾನೇ ತಾಂಬೂಲವನ್ನು ಹಾಕಿಕೊಂಡಿದ್ದರೂ ಅದನ್ನು ತಪ್ಪಿ ನೆರೆದ ಜನರಿಗೆ ಕೈಮುಗಿದು ಹೇಳಿದರು, "ಅಮಲ್ದಾರರು ಅಪ್ಪಣೆ ಕೊಡಿಸಿರುವ ವಿಚಾರ ನಿಮಗೆಲ್ಲ ತಿಳಿದಿದೆ. ದೇವರು, ಸರಕಾರ ಎರಡೂ ಒಂದೇ. ಸರಕಾರದ ದುಡ್ಡಿಗೆ ಅಮಲ್ದಾರರು ಕುಳಿತಿರುವರು; ದೇವಸ್ಥಾನದ ದುಡ್ಡಿಗೆ ನಾನು ನಿಮ್ಮ ಮುಂದೆ ನಿಂತಿರುವೆನು. ನಿಮ್ಮ ಸಹಯೋಗದಿಂದ ಎರಡು ಕೆಲಸವು ಸಾಂಗವಾಗಿ ನೆರವೇರಬೇಕು. ಎಲ್ಲಿ ಪ್ರಜೆಗಳೋ ಅಲ್ಲಿ ಸರಕಾರ; ಎಲ್ಲಿ ಭಕ್ತಿಯೋ ಅಲ್ಲಿ ದೇವರು. ನಿಮ್ಮಿಂದ ಅವೆರಡೂ ಸಾಗಬೇಕು. ಎಷ್ಟು ಹೆಚ್ಚು ಹಣಕ್ಕೆ ಜಮೀನು ಹರಾಜಾದರೆ ಅಷ್ಟು ನಿರ್ವಿಘ್ನತೆಯಿಂದ ದೇವರ ಕಾರ್ಯ ನೆರವೇರುತ್ತದೆ. ದೇವರ ಕಾರ್ಯದಲ್ಲಿ ಯಾವಾಗಲೂ ಚೌಕಾಸಿ ಮಾಡಬಾರದು.

ದೇವರು ನಿಮಗೆ ಒಳ್ಳೆಯದನ್ನು ಮಾಡುತ್ತಾನೆ. ಚಥಸವಾಲಿಗೆ ನೀವೆಲ್ಲ ಏರಿರಬೇಕೆಂದು ದೇವರ ಕಡೆಯಿಂದ ನಾನು ಆಶೀರ್ವಾದ ಮಾಡುತ್ತೇನೆ."

ಪಟೇಲರು ಹರಾಜು ಹಾಕಿದರು; ತೊಂಭತ್ತು ರೂಪಾಯಿ!

ನೆರೆದ ಜನ ಕೇಳುತ್ತಾ ಸುಮ್ಮನೆ ನಿಂತಿತ್ತು. ಯಾರೂ ಮುಂದೆ ಬರಲಿಲ್ಲ.

ಪಾರುಪತ್ತೆಗಾರರ ಉತ್ಸಾಹದ ಮೇಲೆ ನೀರು ಚೆಲ್ಲಿದ ಹಾಗಾಯಿತು. ದೇವರ ಕಾರ್ಯದಲ್ಲಿ ಎಲ್ಲ ಸುಮ್ಮನಿರುವುದನ್ನು ನೋಡಿ ಬಹಳ ನೊಂದು ಕೊಂಡು ಸುತ್ತಲೂ ನೋಡಿದರು. ಯಾರೂ ಪಾರುಪತ್ತೇಗಾರರ ಕಡೆ ನೋಡಲಿಲ್ಲ; ಅವರೇ ಎಲ್ಲರ ಮುಖವನ್ನೂ ಓದಿ, ಶಂಕರಪ್ಪಗೌಡರ ಹತ್ತಿರ ಹೋಗಿ ಹೇಳಿದರು, "ದೇವರ ಕಾರ್ಯದಲ್ಲಿ ನೀನೂ ಇಷ್ಟು ಉದಾಸೀನನಾಗಿ ರುವೆ ಎಂದು ನಾನು ಕನಸಿನಲ್ಲಿಯೂ ನೆನಸಿರಲಿಲ್ಲ. ಹಿಂದೆ ಮುಂದೆ ಯೋಚಿಸ ಬೇಡ, ದೇವರು ನಿನಗೆ ಒಳ್ಳೆಯದನ್ನು ಮಾಡುವನು, ಚಥಸವಾಲು ಹೇಳು."

"ನನಗೆ ಇದ್ದ ಜಮೀನೇ ಸಾಕಾಗಿದೆ; ನನಗೆ ಹಾಗೆ ಕೊಟ್ಟರೂ ಬೇಡ" ಎಂದು ಹೇಳಿ ಶಂಕರಪ್ಪಗೌಡರು ಹಿಂದಕ್ಕೆ ಸರಿದರು.

ಪಟೇಲರು ತೊಂಭತ್ತು ರೂಪಾಯಿಗೆ ಹರಾಜು ಕೂಗುತ್ತಿದ್ದರು. ಯಾರೂ ಮುಂದೆ ಬರುತಿರಲಿಲ್ಲ. ದೇವರ ಸೇವೆಗೆ ಹಣ ಸಿಗುವುದು ದೂರದ ಮಾತಾಗಿತ್ತು. ಪಾರಪತ್ತೇಗಾರರ ಪರಿಶ್ರಮವನ್ನು ಅಮುಲ್ದಾರರು ನೋಡು ತ್ತಿದ್ದರು. ಸಮಯ ವ್ಯರ್ಥವಾಗುತ್ತಿರುವುದನ್ನು ನೋಡಿ ಅವರು ಹೇಳಿ ದರು, "ತೊಂಭತ್ತು ರೂಪಾಯಿಗೆ ಸಹ ಯಾರು ಮುಂದೆ ಬರುತ್ತಿಲ್ಲ. ಹರಾಜಿನ ಹಣವನ್ನು ಕಡಮೆ ಮಾಡಬೇಕಾಗುತ್ತದೆ. ತೊಂಭತ್ತು ರೂಪಾಯಿಗಿಂತ ಕಡಮೆಗೆ ಹರಾಜಾದರೆ ಕಡಮೆಯಾದ ಹಣವನ್ನು ದೇವಸ್ಥಾನದಿಂದ ಕೊಡಬೇಕಾಗುವುದು. ಇಲ್ಲದಿದ್ದರೆ ದೇವಸ್ಥಾನಕ್ಕೆ ಸಂಬಂಧಪಟ್ಟ ಸಾಮಾನನ್ನು ಹರಾಜುಮಾಡಿ ಕಂದಾಯ ಸರಿಮಾಡಬೇಕಾ ಗುತ್ತದೆ. ಹರಾಜನ್ನು ಇಳಿಸಿ ಪಟೇಲರೆ."

ಅಮುಲ್ದಾರರ ಮಾತು ಜನರನ್ನು ಅಪಮಾನದಲ್ಲಿ ತಳ್ಳಿತು. ಊರಿನ ದೇವಸ್ಥಾನ, ದೇವಸ್ಥಾನದ ಸಾಮಾನು ಹರಾಜಾಗುವುದು ಆ ಊರಿನ

ಎಲ್ಲರ ಮನೆ ಹರಾಜಾಗುವುದೂ ಎರಡೂ ಒಂದೇ. ಊರಿನಲ್ಲಿ ಇಷ್ಟುಮಂದಿ ಹಣವಂತರಿದ್ದು ಅವರ ಮುಂದೆ ದೇವಸ್ಥಾನದ ಸಾಮಾನು ಹರಾಜಾಗುವುದೆಂದರೇನು? ಅಪಕೀರ್ತಿ ಬರುವುದು ದೇವರಿಗಲ್ಲ, ಊರಿನವರಿಗೆ. ಆದ್ದರಿಂದ ಎಲ್ಲಾ ಒಬ್ಬರ ಮುಖವನ್ನೊಬ್ಬರು ನೋಡಿದರು. ಅಮಲ್ದಾರರ ಮಾತನ್ನು ಕೇಳಿದ ಪಾರುಪತ್ತೇಗಾರರು ಹುಚ್ಚನಂತೆ ಕುಣಿಯುತ್ತಿದ್ದರು. ಇಷ್ಟು ಮಂದಿ ಇದ್ದು ದೇವರಿಗೆ ಈ ಗತಿಯೇ ಎಂದುಕೊಂಡು ಪುಟ್ಟೇಗೌಡರನ್ನು ಬಲವಂತದಿಂದ ತಂದು ನಿಲ್ಲಿಸಿದರು. ಪುಟ್ಟೇಗೌಡರು ಹೇಳಿದರು. "ದೇವರ ಕೆಲಸವೆಂದು ನಾನು ಬಂದಿದ್ದೇನೆ. ಈ ಹಾಳು ಭೂಮಿಗೆ ಇನ್ನು ಮುಂದೆ ಕಂದಾಯ ಕಟ್ಟಲು ಸಾಧ್ಯವಿಲ್ಲ. ಆದ್ದರಿಂದ ಈ ಜಮೀನನ್ನು ಗೋಮಾಳವನ್ನಾಗಿ ಮಾಡಿ, ಖುಷಿಯ ಕಂದಾಯವನ್ನು ಹಾಕುತ್ತೇನೆಂದು ಅಮಲ್ದಾರರು ಅಪ್ಪಣೆ ಕೊಡಿಸಿದರೆ ನಾನು ನಿಲ್ಲುತ್ತೇನೆ."

"ತರಿ ಜಮೀನನ್ನು ಖುಷಿಯನ್ನಾಗಿ ಮಾಡಿದರೆ ಸರಕಾರಕ್ಕೆ ಕಂದಾಯ ಕಡಮೆಯಾಗುತ್ತದೆ. ಅದು ಸಾಧ್ಯವಿಲ್ಲ" ಎಂದು ಅಮಲ್ದಾರರು ಹೇಳಿದರು.

"ಹಾಗಾದರೆ ನನ್ನಿಂದ ಸಾಧ್ಯವಿಲ್ಲ; ಗೋಮಾಳ ಮಾಡಿಕೊಡುವ ಹಾಗಿದ್ದರೆ ನನಗಿರಲಿ" ಎಂದು ಪುಟ್ಟೇಗೌಡ ನುಡಿದರು.

ನೆರೆದ ಜನರೆಲ್ಲ ಪುಟ್ಟೇಗೌಡರನ್ನು ಸಮರ್ಥಿಸಿದರು. ಅದನ್ನು ನೋಡಿ ಅಮಲ್ದಾರರು ಹೇಳಿದರು, "ಗೋಮಾಳವನ್ನಾಗಿ ಮಾಡಲಾಗುವುದು."

"ಹಾಗಾದರೆ ನನಗೆ ತೊಂಭತ್ತೊಂದುರೂಪಾಯಿಗಿರಲಿ. ತೊಂಭತ್ತು ರೂಪಾಯಿ ಸರಕಾರಿ ಕಂದಾಯವಾಯಿತು, ಒಂದು ರೂಪಾಯಿ ದೇವಸ್ಥಾನಕ್ಕಾಯಿತು" ಎಂದರು ಪುಟ್ಟೇಗೌಡರು.

ದೂರದಲ್ಲಿ ಇದನ್ನು ಸಬ್ಬಯ್ಯಗೌಡ, ಗುರಪ್ಪಗೌಡ ನೋಡುತ್ತಾ ನಿಂತಿದ್ದರು. ಸಹಿಸಲಾರದೆ ಗುರಪ್ಪಗೌಡ ಹೋಗಿ ಶಂಕರಪ್ಪಗೌಡರನ್ನು ಅಂಗಲಾಚಿಕೊಂಡು ಬೇಡಿದ, "ತೊಂಭತ್ತೊಂದು ರೂಪಾಯಿ ನನಗೆ ಸಹಾಯಮಾಡಿ, ನಾನು ಹರಾಜಿನಲ್ಲಿ ಹಿಡಿಯುತ್ತೇನೆ. ಏನಾದರೂ ನಿಮ್ಮ ಋಣ ತೀರಿಸುವೆನು."

“ ಹಿಂದೆ ನನ್ನ ಕೈಯ್ಯಲ್ಲಾದ ಸಹಾಯ ಮಾಡಿದೆ. ಈಗ ನನ್ನಿಂದ ಸಾಧ್ಯವಿಲ್ಲ.” ಎಂದರು ಶಂಕರಪ್ಪಗೌಡರು.

ಅಲ್ಲಿಂದ ಗುರಪ್ಪಗೌಡ ಹೋಗಿ ಬಸಪ್ಪಗೌಡರ ಕಾಲು ಕಟ್ಟಿಕೊಂಡ. ಅವರು ಸಾಧ್ಯವಿಲ್ಲವೆಂದರು.

ಸುಬ್ಬಯ್ಯ ಗುರಪ್ಪಗೌಡ ತಿರುಗುತಿರುವುದನ್ನು ನೋಡಿ, ಅವನ ಹತ್ತಿರ ಸುಬ್ಬಯ್ಯಗೌಡ ಹೋಗಿ ಕೇಳಿದ. “ ನಿನ್ನ ಹತ್ತಿರ ಎಷ್ಟು ದುಡ್ಡಿದೆ? ”

ಅಣ್ಣನ ಮುಖನೋಡಿ ಹೇಳಿದ, “ ನನ್ನ ಹತ್ತಿರ ಒಂದುಬಿಡಿ ಕಾಸಿಲ್ಲ ನಿನ್ನ ಹತ್ತಿರ ಎಷ್ಟಿದೆ? ”

“ ನನ್ನ ಹತ್ತಿರವೂ ಏನೂ ಇಲ್ಲ. ಮನೆಯಲ್ಲಿ ಹೆಂಗಸಿನ ಹತ್ತಿರ ವಂದೂವರೆ ರೂಪಾಯಿ ಇದೆ.”

“ ಹಾಗಾದರೇನು ಮಾಡೋಣ? ”

“ ನೀನು ಹೇಳಿದ ಹಾಗೆ? ”

“ ಇಬ್ಬರ ಹೆಂಗಸರ ಕೊರಳಲ್ಲಿರುವ ತಾಳಿಯನ್ನು ಬಿಟ್ಟು ಗುಂಡು ಗಳನ್ನು ಮಾರೋಣ.”

“ ಹಾಗೇ ಆಗಲಿ.”

ಇಬ್ಬರೂ ತಮ್ಮ ಮನೆಗಳಿಗೆ ಹೋಗಿ ತಾಳಿಯಲ್ಲಿರುವ ಗುಂಡು ಗಳನ್ನು ತೆಗೆದು ಮಾರಿದರು. ನರಹತ್ಯ ಮಾಡಿದ ಪಾಪಗಳಂತೆ ಇಬ್ಬರ ಮುಖದ ಮೇಲೆ ಕಪ್ಪು ಕವಿದಿತ್ತು. ಕಂದಾಯಕ್ಕೆ ಸರಿಯಾಗಿ ಸಿಕ್ಕಿತೋ ಎಂಬಂತೆ ತಾಳಿಯ ಗುಂಡುಗಳನ್ನು ಮಾರಿದ್ದರಿಂದ ತೊಂಭತ್ತು ರೂಪಾಯಿ ಬಂತು.

ಸುಬ್ಬಯ್ಯಗೌಡ, ಗುರಪ್ಪಗೌಡ ಹರಾಜಾಗುತಿರುವ ಸ್ಥಳಕ್ಕೆ ಕರಿ ಮಣಿಯ ಗುಂಡುಗಳನ್ನು ಮಾರಿದ ಹಣ ತೆಗೆದುಕೊಂಡು ಬಂದಾಗ ಪಾರು ಪತ್ತೆಗಾರರು ಬಲವಂತದಿಂದ ಶ್ಯಾಬೋಗೌಡರನ್ನು ತೊಂಭತ್ತೈದು ರೂಪಾಯಿಗೆ ನಿಲ್ಲಿಸುತ್ತಿದ್ದರು.

ಸಹೋದರರಿಬ್ಬರೂ ಶ್ಯಾಮೇಗೌಡರ ಹತ್ತಿರಹೋಗಿ ಪ್ರಾರ್ಥಿಸಿಕೊಂಡರು, "ನಮ್ಮ ಜಮೀನು ನಮಗಾಗಲಿ, ನಾವು ನಿಲ್ಲುತ್ತೇವೆ, ತಾವು ನಿಲ್ಲಬೇಡಿ."

"ಜಮೀನು ಯಾರಿಗೆ ಬೇಕು? ಪಾರುಪತ್ತೆಗಾರರು ಬಲವಂತ ಮಾಡುತಿರುವುದರಿಂದ ದೇವರ ಕಾರ್ಯವೆಂದು ನಿಂತೆ, ನಿಮ್ಮ ಜಮೀನು ನಿಮಗಾಗುವಾಗ ನಾನು ಅಡ್ಡಿ ಬರುವುದಿಲ್ಲ."

ದೇವರ ಕಾರ್ಯಕ್ಕೊಂದು ಪಾರುಪತ್ತೆಗಾರರ ಹಿಂಸೆಗೆ ಶ್ಯಾಮೇಗೌಡರು ತೊಂಭತ್ತೈದು ರೂಪಾಯಿಗೇರಿಸಿದ್ದರು. ಸಹೋದರರ ಹತ್ತಿರವಿರುವುದು ತೊಂಭತ್ತು ರೂಪಾಯಿ. ಹರಾಜಿನಲ್ಲಿ, ಅದರಲ್ಲೂ ಅಮಲ್ದಾರರ ಮುಂದೆ ಏರಿಸಿದ್ದನ್ನು ಕಡಮೆ ಮಾಡುವುದಕ್ಕಾಗುತ್ತದೆಯೆ? ಹರಾಜಿನಲ್ಲಿ ಸವಾಲ್ ಹೇಳುವಾಗ ಶ್ಯಾಮೇಗೌಡರು ಹೇಳಿದರು, "ಸುಬ್ಬಯ್ಯಗೌಡ ಗುರಪ್ಪಗೌಡ ಇವರಿಗೆ ಜಮೀನು ಬೇಕಂತೆ, ಅವರೇ ಏರಿಸಲಿ, ನನಗೆ ಬೇಡ."

ತುಂಬಾ ಸಂತೋಷದಿಂದ ಪಾರುಪತ್ತೆಗಾರರು ಆ ಸಹೋದರರ ಹತ್ತಿರ ಹೋಗಿ ಹೇಳಿದರು, "ನೀವೂ ಹರಾಜಿನಲ್ಲಿ ಏರಿಸುತ್ತೀರೆಂದು ನನಗೆ ಗೊತ್ತಿರಲಿಲ್ಲ. ದೇವರ ಕಾರ್ಯ ನಡೆಯಬೇಕು; ನಿಮ್ಮಂಥ ಭಕ್ತರಿಂದ ದೇವರ ಕಾರ್ಯ ಇದುವರೆಗೂ ಸಾಂಗವಾಗಿ ನೆರವೇರಿಕೊಂಡು ಬಂದಿದೆ. ಶ್ಯಾಮೇಗೌಡರು ತೊಂಭತ್ತೈದು ರೂಪಾಯಿಗೆ ಏರಿಸಿದ್ದಾರೆ, ಮುಂದಕ್ಕೆ ನೀವು ಧಾರಳವಾಗಿ ಏರಿಸಬಹುದು."

ಅತ್ಯಂತ ದೀನತೆಯಿಂದ ಪಾರುಪತ್ತೆಗಾರರ ಮುಖ ನೋಡುತ್ತಾ ಸಹೋದರರಿಬ್ಬರೂ ಹೇಳಿದರು, "ನಮ್ಮ ಹತ್ತಿರ ತೊಂಭತ್ತೇ ರೂಪಾಯಿ ಇದೆ."

"ದೇವರ ಕಾರ್ಯದಲ್ಲಿ ವಿಘ್ನವೇ! ರಾಮ ರಾಮ!! ನನ್ನ ಕಿವಿ ಏನು ಕೇಳುತ್ತಿದೆಯಪ್ಪಾ? ಇಂಥಾ ಮಾತನ್ನು ಈ ವಯಸ್ಸಿನಲ್ಲಿ ಕೇಳಬೇಕಾಯಿತೇ? ಸುಬ್ಬಯ್ಯಗೌಡ ನೀನೇಕೆ ಹೀಗಾದೆ? ನಿನ್ನ ಬಾಯಿಂದ ಇಂಥಾ ಮಾತು ಬರುವುದೆಂದು ನಾನು ನೆನಸಿರಲಿಲ್ಲ. ಕಲಿ ಮಹರಾಯ! ಇದೆಲ್ಲಾ ನಿನ್ನ ಮಹಿಮೆ" ಎಂದು ಒಂದೇ ಉಸುರಿನಲ್ಲಿ ಪಾರುಪತ್ತೆಗಾರರು ವಿಷಾದ, ದುಃಖ, ಪಶ್ಚಾತ್ತಾಪ, ಗ್ಲಾನಿಯನ್ನು ತೋರ್ಪಡಿಸಿದರು.

ಈ ಕಡೆ ಘಳಿಗೆಯಲ್ಲಿ ನಮ್ಮ ಬಾಯಿಂದ ಇಂಥಾ ಮಾತು ಬಂತಲ್ಲಾ ಎಂದು ಸಹೋದರರಿಬ್ಬರೂ ನೊಂದುಕೊಂಡರು. ಮುಂಕರಂತೆ ಕೈಯಲ್ಲಿ ತೊಂಭತ್ತು ರೂಪಾಯಿಗಳನ್ನು ಹಿಡಿದುಕೊಂಡು ನಿಂತಿದ್ದರು. ಸುಬ್ಬಯ್ಯ ಗೌಡ ಹೇಳಿದ, " ದೇವರ ಕಾರ್ಯ ಮುಖ್ಯ, ಅದು ಸಾಂಗವಾಗಿ ನೆರವೇರು ವುದು ಎಲ್ಲರಿಗೂ ಬೇಕಾದ್ದು. ನಮ್ಮಿಂದಲೂ ದೇವರ ಸೇವೆಗೆ ಅಲ್ಪಸ್ವಲ್ಪ ಸಹಾಯವಾಗಲಿ, ಹತ್ತು ರೂಪಾಯಿ ಕೈಗಡಕೊಡಿ, ನೂರು ರೂಪಾಯಿಗೆ ನಾವೇ ನಿಲ್ಲುತ್ತೇವೆ."

ಪಾರುಪತ್ತೆಗಾರರು ನಕ್ಕರು. ಸಹೋದರರಿಬ್ಬರನ್ನೂ ನೋಡಿ ಹೇಳಿದರು, ನೀನು ಮೊದಲಿನ ಸುಬ್ಬಯ್ಯಗೌಡನಲ್ಲವೆಂದು ಹೇಳಿದ್ದು ತಪ್ಪಲ್ಲ. ನನ್ನನ್ನು ಸಾಹುಕಾರನೆಂದು ಮಾಡಿಕೊಂಡೆಯೋ ಹೇಗೆ! ನಿಮ್ಮಂಥವರು ಕೊಡುವ ನಾಲ್ಕು ಕಾಸು ನನ್ನ ಖರ್ಚಿಗೆ ಸಾಲದು; ನಾನು ಬಡವ, ದೇವರು ಕೊಡುವ ಹಾಗಿಲ್ಲ."

" ಕೈಗಡವಲ್ಲದಿದ್ದರೆ ಚಿಂತೆಯಿಲ್ಲ, ನಾಳೆಯಿಂದ ನಾಲ್ಕು ತಿಂಗಳು ಸಂಬಳ ಸಾರಿಗೆಯಿಲ್ಲದೆ ನಿಮ್ಮ ಮನೆಯಲ್ಲಿ ಆಳಾಗಿ ದುಡಿಯುವೆನು. ನನಗೆ ಅಕ್ಕಿ ಉಪ್ಪು ಸಹ ಕೊಡಬೇಡಿ ಹತ್ತು ರೂಪಾಯಿ ಮುಂಗಡ ಕೊಡಿ" ಎಂದು ಜೋಲು ಮುಖದಲ್ಲಿ ಹಲ್ಲು ಕಿರಿದು ಗುರಪ್ಪಗೌಡ ಕೇಳಿದ.

ಸುಬ್ಬಯ್ಯಗೌಡನ ಕಡೆ ತಿರುಗಿ ಪಾರುಪತ್ತೆಗಾರರು ಹೇಳಿದರು, " ಏನಯ್ಯ ತಮ್ಮನನ್ನು ತಯ್ಯಾರು ಮಾಡಿಬಿಟ್ಟಿರುವೆ ? ಇನ್ನು ನಿನಗೆ ಪರವಾವಿಲ್ಲ. ಗುರಪ್ಪಗೌಡ ಮಾತು ಕಥೆ ಚೆನ್ನಾಗಿ ಕಲಿತಿದ್ದಾನೆ. ನನ್ನ ಮನೆಯಲ್ಲಿ ಕೆಲಸ ಮಾಡುವುದಕ್ಕೆ ನನಗೆ ಮನೆಯಲ್ಲಿದೆ ? ದೇವಸ್ಥಾನ ದಲ್ಲಿರುವೆನು. ಏನಿದ್ದರು ದೇವರ ದರ್ಬಾರಿನಲ್ಲಿ, ದೇವರ ಸೇವೆಯಲ್ಲಿ ನಡೆ ಯುತ್ತದೆ. ಹಾಗೆ ನಿನಗೆ ಕೆಲಸ ಮಾಡಿ ತೀರಿಸುವ ಮನಸ್ಸಿದ್ದರೆ ಶಂಕರಪ್ಪ ಗೌಡ, ಬಸಪ್ಪಗೌಡ, ಪುಟ್ಟೇಗೌಡ ಇವರಲ್ಲಿ ಯಾರ ಹತ್ತಿರವಾದರೂ ಹೋಗಿ ಕೇಳು."

ಗಂಡನ ಮರಣೋನ್ಮುಖವನ್ನು ಸತಿ ನೋಡುವ ಕಣ್ಣಿನಲ್ಲಿ ಗುರಪ್ಪ ಗೌಡ ಪಾರುಪತ್ತೆಗಾರರನ್ನು ನೋಡಿದ. ಅವರಿಗೆ ಗುರಪ್ಪಗೌಡನ ಶರೀರ ಕಾಣಿಸಿತೆ ವಿನಾ ಅಂತಃಕರಣ ಕಾಣಿಸಲಿಲ್ಲ. ಅದು ಕಾಣಿಸುವುದಾದರೂ

ಹೇಗೆ ? ರೈತನ ಹೃದಯ ರೈತ ತಿಳಿದಿರುತ್ತಾನೆ. ತಮ್ಮನ ಅಂತಃಕರಣದ ಸ್ವಲ್ಪ ಭಾಗವನ್ನು ಅಣ್ಣ ತನ್ನ ಅನುಭೂತಿಯಿಂದ ವಿವರಿಸಿದ, "ರೈತ ಕೂಲಿ ಕೆಲಸ ಮಾಡುವುದಿಲ್ಲ. ಕೂಲಿ ಕೆಲಸಕ್ಕೆ ಹೊರಡುವ ರೈತ ಮನುಷ್ಯತ್ವದ ಎಲ್ಲ ಗುಣಗಳನ್ನು ಬಿಟ್ಟಿರುತ್ತಾನೆ. ರೈತಾಪಿ ಜೀವನದ ಅಗ್ನಿಯಲ್ಲಿ ಅವನಲ್ಲಿದ್ದ ಮನುಷ್ಯತ್ವವೆಲ್ಲ ಸುಟ್ಟು ಕಪ್ಪಾಗಿ ರಾಕ್ಷಸತ್ವವನ್ನು ಹೊಂದಿದಾಗ ಕೂಲಿಯಾಳಾಗಿ ಹೊರಡುತ್ತಾನೆ. ಈಗ ಸಮಾಜದ ಮೇಲೆ ತಿರುಗಿ ಬೀಳುತ್ತಾನೆ. ದೇವಸ್ಥಾನವೆಂದು ನಿಮ್ಮಲ್ಲಿ ಕೆಲಸ ಮಾಡಲು ಅವನು ಮನಸ್ಸು ಮಾಡಿರುವುದು."

"ನೀವು ನನಗೆ ಉಪದೇಶ ಮಾಡುತಿರುವಂತೆ ಕಾಣುತ್ತದೆ. ಈ ಬುದ್ಧಿವಂತಿಕೆಯ ಮಾತನ್ನು ದೇವರು ನಿಮ್ಮ ಮನಸ್ಸಿನಲ್ಲಿ ಹೇಗೆ ತಂದನೋ ಅದು ಅವನಿಗೆ ಗೊತ್ತು. ಇನ್ನು ದೇವಸ್ಥಾನದಲ್ಲಿ ಕೆಲಸ ಮಾಡಲು ಕೂಲಿ ಕೊಡಬೇಕೆ ? ಇನ್ನು ದೇವರ ಸೇವೆಯೆಲ್ಲ ದುಡ್ಡಿನ ಮೇಲೆ ನಡೆಯಬೇಕಾದರೆ ಇದಕ್ಕಿಂತಲೂ ಪಾಪಕರವಾದರೂ ಕಾರ್ಯ ಈಪ್ರಪಂಚದಲ್ಲಿ ಇನ್ನೇನಿದೆ?"

ಮಾತು ಕಥೆಯಲ್ಲಿಯೇ ಸಮಯ ವ್ಯರ್ಥವಾಗುತ್ತಿರುವುದನ್ನು ನೋಡಿ ಅಮ್ದಲಾರರು ಪಾರುಪತ್ತೇಗಾರರನ್ನು ಕರೆದು ಹೇಳಿದರು. "ಹೊತ್ತಾಗಿ ಹೋಯಿತು; ಹಸಿವಾಗುತಿದೆ, ಬೇಗ ಮುಗಿಸು ಸರಕಾರಿ ಹಣ ಬಂದು ಹೋಯಿತು. ನಾನಿನ್ನು ಹರಾಜನ್ನು ನಿಲ್ಲಿಸುತ್ತೇನೆ."

ಪಾರು ಪತ್ತೆಗಾರರು—ದೇವರ ದರ್ಬಾರಿಗೆ ಬಂದು ಹಸಿವೆಯಿಂದ ಹೋಗುವರೇ ಸ್ವಾಮಿ. ಯಾವಾಗಲೂ ಸರಕಾರಿಕೆಲಸ ಜಾಗ್ರತೆ, ದೇವರ ಕಾರ್ಯ ನಿಧಾನ. ಜನರಲ್ಲಿ ದೇವರು,ಭಕ್ತಿ ಇದೆಲ್ಲ ಮಾಯವಾಗುತ್ತಾ ಬಂದಿವೆ. ಸ್ವಲ್ಪ ನಿಧಾನವಾದರೂ ಸ್ವಾಮಿಯವರು ಸಹಿಸಬೇಕು. ಮಾಣಿಯನ್ನು ಅಡುಗಗೆ ಆಗಲೇ ಕಳುಹಿಸಿದ್ದೇನೆ ಪ್ರಸಾದವನ್ನು ಸ್ವೀಕರಿಸಿ, ತಂಪುಹೊತ್ತಿನಲ್ಲಿ ದಯಮಾಡಿಸೋಣವಾಗಲಿ.

ಅಮಲ್ದಾರರು....ಹಾಗೆ ಆಗಲಿ ! ಹರಾಜಿನಲ್ಲಿ ಯಾರೂ ಮುಂದಕ್ಕೆ ಬರುತ್ತಿಲ್ಲ.

## ಹದಿನಾಲ್ಕು

"ಎಲ್ಲಾ ಕಡೆ ಹೋಗಿ ಪ್ರಯತ್ನಪಟ್ಟಾಯಿತು, ಹಾಲು ಎಲ್ಲಿಯೂ ಸಿಗಲಿಲ್ಲ" ಮಾಣಿ ಹೇಳಿದ.

"ಎಲ್ಲಿಯೂ ಸಿಗಲಿಲ್ಲ, ಯಾವ ಹಳ್ಳಿಯಲ್ಲಿಯೂ ಸಿಗಲಿಲ್ಲ? ಮುಂದೆ ಗತಿ!" ಪಾರುಪತ್ತೆಗಾರರು ಉದ್ರೇಗದಿಂದ ಮಾಣಿಯನ್ನು ಕೇಳಿದರು.

"ಇಲ್ಲ ಯಾರ ಮನೆಯಲ್ಲಿಯೂ ಸಿಗಲಿಲ್ಲ."

"ಹಾಗಾದರೆ ಅಮಲ್ದಾರರು ಹೇಗೆ ಊಟಮಾಡುತ್ತಾರೆ? ಊಟಕ್ಕೆ ಖೀರಿಲ್ಲ? ಏನೇನು ಮಾಡಿರುವೆ?"

"ಅನ್ನ, ಬೇಳೆಸಾರು, ಚಿತ್ರಾನ್ನ, ಕೂಟು; ಮೊಸರಿದೆ"

"ರೈತರನ್ನು ಏನೆಂದು ಕೇಳಿದೆ?"

"ಅದೇ ಪಾರುಪತ್ತೆಗಾರರು ಹಾಲಿಗೆ ಹೇಳಿ ಕಳುಹಿಸಿದ್ದರೆಂದು."

"ಅದೇ ನಿನ್ನ ತಲೆ; ಈ ಸಾರಿ ದೇವರಿಗೆಂದು ಕೇಳು; ಹಾಲು ಕಾಯಿಸಿದೆ ಎಂದರೆ ಚಿಂತೆಯಿಲ್ಲ. ಅಮಲ್ದಾರರಿಗೆ ಕೊಡಿ ಎಂದು ಹೇಳು, ತಿಳಿಯಿತಾ?"

"ಹೂಂ"

"ಏನು ತಿಳಿಯಿತು ಹೇಳು?"

ದೇವರ ಅಭಿಷೇಕಕ್ಕೆ ತಂಬಾಲುಬೇಕೆಂದು ಮೊದಲು ಕೇಳುತ್ತೇನೆ; ಅವರು ಕಾಯಿಸಿದ ಹಾಲಿದೆ ಎಂದರೆ ಅದನ್ನೇ ಕೊಡಿ ಅಮಲ್ದಾರರು ಬಂದಿದ್ದಾರೆ ಎಂದು ಹೇಳುತ್ತೇನೆ."

"ಸರಿ, ಹಾಗೆ ಮಾಡು. ಹರಾಜು ಮುಗಿಯುತ್ತಾ ಬಂತು, ಅದು ಮುಗಿದ ಕೂಡಲೇ ಪಟೇಲನನ್ನು ಅಮಲ್ದಾರರ ಜವಾನನೊಂದಿಗೆ ಕಳುಹಿಸುತ್ತೇನೆ, ಬೇಗ ಹೋಗು."

"ತೊಂಭತ್ತೇಳು! ತೊಂಭತ್ತೇಳು!!" ಎಂದು ಪಟೇಲರು ಸವಾಲ್ ಕೂಗಿದಾಗ ಪಾರುಪತ್ತೆಗಾರರು ಮಾಣಿಯೊಂದಿಗೆ ಮಾತನಾಡಿಕೊಂಡು ಹರಾಜಿನ ಸ್ಥಳಕ್ಕೆ ಬಂದಿದ್ದರು. ಇನ್ನು ಹರಾಜು ತೊಂಭತ್ತೇಳು ರೂಪಾಯಿಯಲ್ಲಿರುವುದನ್ನು ನೋಡಿ ಪಾರುಪತ್ತೆಗಾರರು ಹೇಳಿದರು, "ತೊಂಭತ್ತೇಳು ಒಳ್ಳೇ ಸಂಖ್ಯೆಯಲ್ಲ, ಯಾರಾದರು ಮುಂದಕ್ಕೆ ಬನ್ನಿ"

ಯಾರೂ ಚಢಸವಾಲು ಮಾಡಲಿಲ್ಲ.

ಹೊಳೆಬೈಲು ಸೋಮೇಗೌಡರು ಆಗತಾನೆ ಬಂದು ನಿಂತಿರುವುದನ್ನು ನೋಡಿ ಪಾರುಪತ್ತೆಗಾರರು ಅವರನ್ನು ತಂದು ಮುಂದೆ ನಿಲ್ಲಿಸಿ ಹೇಳಿದರು, "ಚಢಸವಾಲು ಮಾಡು."

"ಹೌದು ಗೌಡರೇ, ನಿಮ್ಮೂರಿನಲ್ಲಿ ಹರಾಜಾಗುತ್ತದೆ; ನೀವೆಲ್ಲ ಸುಮ್ಮನೆ ನಿಂತಿರುವಿರಲ್ಲ, ನಮಗೆ ನೀವೆಲ್ಲರೂ ಸಹಾಯ ಮಾಡಬೇಕು" ಎಂದು ಅಮಲ್ದಾರರು ಹೇಳಿದರು.

ಹೊಳೆಬೈಲು ಸೋಮೇಗೌಡರು ಹೇಳಿದರು, "ಈ ತರಿಜಮೀನನ್ನು ಗೇಣಿಮಾಳವನ್ನಾಗಿ ಮಾಡಿಕೊಟ್ಟರೆ ಚಢಸವಾಲಿಗೆ ನಾನು ನಿಲ್ಲುತ್ತೇನೆ"

"ಅದು ಮೊದಲೇ ನಿಶ್ಚಯವಾಗಿದೆಯಲ್ಲ" ಎಂದು ಪಾರುಪತ್ತೆಗಾರರು ಅಮಲ್ದಾರರನ್ನು ನೋಡುತ್ತಾ ಹೇಳಿದರು, "ಸರಿಯಾಗಿದ್ದರೆ ಮೇಲಿನದು ಜನಗಳಿಗಾಗುತ್ತಿತ್ತು ಕೆಳಗಿನದು ದನಗಳಿಗಾಗುತಿತ್ತು, ಕಂದಾಯ ಸರಕಾರಕ್ಕೆ ಬರುತಿತ್ತು ನೀವು ಅದನ್ನು ಒಪ್ಪುವುದು ಗೇಣಿಮಾಳವಾದರೆ ಇರಲಿ ಎನ್ನುತ್ತೀರಿ ಮೇಲಕ್ಕೆ ಬರೆದು ಹಾಕುತ್ತೇನೆ" ಎಂದು ಅಮಲ್ದಾರರು ಹೇಳಿದರು.

ಹೊಳೆಬೈಲು ಸೋಮೇಗೌಡನ ಪರವಾಗಿ ಕೊನೆಯ ಸಾರಿ ತೊಂಭತ್ತೆಂಟು ರೂಪಾಯಿಗೆ ಪಾರುಪತ್ತೆಗಾರರೇ ಚಢಸವಾಲು ಮಾಡಿದರು. ಅಲ್ಲಿಗೆ ಹರಾಜು ಮುಗಿಯಿತು.

ಹರಾಜಿನ ಸ್ಥಳದಲ್ಲಿಯೇ ಸೋಮೇಗೌಡರು ಹಣವನ್ನು ಲೆಕ್ಕಮಾಡಿ ಪಾವತಿಮಾಡಿದರು ಅಮಲ್ದಾರರು ಹಣಕ್ಕೆ ರಸೀದಿಯನ್ನು ಕೊಟ್ಟು ಈ ರೀತಿ ರಿಕಾರ್ಡು ಮಾಡಿದರು :

ಅಣ್ಣೇಗುಡ್ಡೆ ದೇವರ ಹೆಸರಿನಲ್ಲಿರುವ ಅಣ್ಣೇಮಕ್ಕಿ ಜಮೀನೆಲ್ಲವನ್ನೂ ಹೊಳೇಬೈಲ ಓಬಯ್ಯಗೌಡರ ಮಗ ಸೋಮೇಗೌಡರು ಕಂದಾಯ ಬಾಕಿ ಹರಾಜಿನಲ್ಲಿ ನಿಂತು ಎಲ್ಲ ಹಣವನ್ನು ನಗದಾಗಿ ಪಾವತಿ ಮಾಡಿರುತ್ತಾರೆ. ಇನ್ನುಮುಂದೆ ಅಣ್ಣೇಮಕ್ಕಿ ಜಮೀನಿಗೆ ಅವರೇ ಹಕ್ಕುದಾರರು. ಇನ್ನು

ಮುಂದೆ ಈ ಜಮೀನನ್ನು ಅವರು, ಅವರ ವಂಶಪರಂಪರೆಯಾಗಿ ಮಕ್ಕಳೂ ಮೊಮ್ಮಕ್ಕಳೂ ಅಥವಾ ಅವರಿಂದ ಅಧಿಕಾರ ಪಡೆದವರೂ ಅನುಭವಿಸ ತಕ್ಕದ್ದು.

ಈ ರೀತಿ ಮೇಲಕ್ಕೆ ಶಿಫಾರಸ್ ಮಾಡಿದರು:

ಈ ಜಮೀನು ಬೀಳುಬಿದ್ದು ಕಾಡು ಬೆಳೆದಿರುವುದರಿಂದ ತರಿ ಸಾಗುವಳಿಗೆ ಯೋಗ್ಯವಾಗಿಲ್ಲ. ಗೋಮಾಳವನ್ನಾಗಿ ಮಾಡಬಹುದು. ಆದ್ದರಿಂದ ತರಿ ಕಂದಾಯವನ್ನು ತೆಗೆದು ಗೋಮಾಳವನ್ನಾಗಿ ಪರಿವರ್ತಿಸಬಹುದು.

ಛಾಪಾಕಾಗದದ ಮೇಲೆ ಕ್ರಯಪತ್ರವಾಗದೆ, ಒಳ್ಳೆ ಕಾಗದದ ಮೇಲೆ ಬರೆವಣಿಗೆ ಮುಕ್ತಾಯವಾದುದನ್ನು ನೋಡಿ ಸುಬ್ಬಯ್ಯಗೌಡ ಹೇಳಿದ, "ನಮ್ಮ ಪೂರ್ವಿಕರು ಇಲ್ಲಿ ಕಾಡನ್ನು ಕಡಿದು ಗದ್ದೆ ಮಾಡಿದ್ದರಂತೆ, ಅಂದಿನಿಂದ ಅವರು, ಅವರ ವಂಶದವರಾದ ನಾವು ರೂಢಿಸಿಕೊಂಡು ಬಂದೆವು. ನಮ್ಮ ಕಾಲದಲ್ಲಿ ಆರುಸಾರಿ ಕ್ರಯಪತ್ರವಾಯಿತು, ಆರು ಸಾರಿಯೂ ನಂಬಿಕೆಯ ಕ್ರಯಪತ್ರ. ಈಗ ನಿಜವಾಗಿಯೂ ಬೇರೆಯವರ ಕೈಗೆ ಹೋಗುತ್ತದೆ, ಆದರೆ ಛಾಪಾಕಾಗದವೂ ಇಲ್ಲ, ರಿಜಿಸ್ಟರೂ ಇಲ್ಲ."

"ಈ ಕ್ರಯಪತ್ರ, ರಿಜಿಸ್ಟರಿನ ಹಣವನ್ನೆಲ್ಲಾ ನಾವು ಮೊದಲೇ ಸರಕಾರಕ್ಕೆ ಕಟ್ಟಿದ್ದೇವೆ. ಪೂರ್ವದಲ್ಲಿ ದನಕರು, ಹುಲಿ ಕರಡಿಗಳು ಇರುತ್ತಿದ್ದ ಸ್ಥಳವಂತೆ. ನಮ್ಮ ಹಿರಿಯರು ಕಾಡನ್ನು ಕಡಿದು ಬಯಲುಮಾಡಿ, ವ್ಯವಸಾಯಕ್ಕೆ ಯೋಗ್ಯವನ್ನಾಗಿ ಮಾಡಿದ್ದರು. ನಮ್ಮ ಕಾಲದಲ್ಲಿ ತಿರುಗಿ ಕಾಡಿನ ಪಕ್ಷಿ ಕಾಡಿಗೆ ಹೋಗುವಂತೆ, ವ್ಯವಸಾಯದ ಜಮೀನು ಗೋಮಾಳವಾಯಿತು. ಆದ್ದರಿಂದ ಜಮೀನಿಗೆ ಬೆಲೆಯೂ ಇಲ್ಲ; ಕ್ರಯಪತ್ರಕ್ಕೆ ಛಾಪಾಕಾಗದವೂ ಇಲ್ಲ" ಎಂದು ಗುರಪ್ಪಗೌಡ ಹೇಳಿದ.

ಸುಬ್ಬಯ್ಯಗೌಡ ಹೇಳಿದ, "ಆಗ ಹುಟ್ಟಿದ ಪತ್ರಗಳೆಲ್ಲ ನಂಬಿಕೆಯ ಕ್ರಯಪತ್ರಗಳಾಗಿದ್ದುದರಿಂದ ಹನ್ನೆರಡೂವರೆ ರೂಪಾಯಿ ಛಾಪಾಕಾಗದ ಬೇಕಾಗುತ್ತಿತ್ತು. ಇದು ಕಂದಾಯ ಬಾಕಿಗೆ ಹರಾಜಾದ್ದರಿಂದ ಇನ್ನು ಮುಂದೆ ಕಂದಾಯವೂ ಇಲ್ಲ, ನಂಬಿಕೆ ಕ್ರಯಪತ್ರವೂ ಇಲ್ಲ."